KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಜುಲೈ ೩೧, ೨೦೦೮ (ಶ್ರಾವಣ ೯, ಶಕ ವರ್ಷ ೧೯೩೦) | ಸಂಚಿಕೆ ೩೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ :** ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳಿಗೆ ಆಹಾರ ಸರಬರಾಜು ಮಾಡುವ ಪದ್ಧತಿಯನ್ನು ಸರಳೀಕರಣಗೊಳಿಸುವಿಕೆ.

**ಉಲ್ಲೇಖ :** 1) ಆದೇಶ ಸಂಖ್ಯೆ:ಸಕಕಾ 54 ಬಿಪಿಎಸ್ 90 ಬೆಂಗಳೂರು, ದಿ:30–04–1992.
2) ಆದೇಶ ಸಂಖ್ಯೆ:ಎಫ್‌ಸಿಎಸ್ 341 ಡಿಆರ್‌ಎ 90 ಬೆಂಗಳೂರು, ದಿ:21–02–1997.
3) ಆದೇಶ ಸಂಖ್ಯೆ:ಎಫ್‌ಡಿ 1 ಟಿಟಿಸಿ 2001, ದಿ:22–01–2001.
4) ಆದೇಶ ಸಂಖ್ಯೆ:ಸಕಇ 347 ಎಸ್‌ಇಡಬ್ಲ್ಯೂ 2001, ದಿ:15–12–2001.
5) ಆದೇಶ ಸಂಖ್ಯೆ:ಎಫ್‌ಸಿಎಸ್ 74 ಎಫ್‌ಸಿಎಸ್ 2002, ದಿ:18–05–2002.
6) ಸುತ್ತೋಲೆ ಸಂಖ್ಯೆ: ಸಕಇ 616 ಪಕವಿ 2003, ದಿ:19–12–2003.
7) ಭಾರತ ಸರ್ಕಾರದ ಪತ್ರ ಸಂಖ್ಯೆ: 4–8/2007 ಬಿಪಿ–II , ದಿ:01–11–2007.

**ಪೀಠಿಕೆ:**

ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗಳ ಅಧೀನದಲ್ಲಿ ಬರುವ ಹಲವೊಂದು ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳಿಗೆ ಭೇಟಿ ನೀಡಿದ ಕೆಲವು ಸಂಘ ಸಂಸ್ಥೆಗಳು ಅವುಗಳ ನಿರ್ವಹಣೆ, ಆಹಾರ ಸರಬರಾಜು ಇತ್ಯಾದಿಗಳು ಸರಿಯಾಗಿ ನಡೆಯುತ್ತಿಲ್ಲದಿರುವ ಬಗ್ಗೆ ದೂರು ನೀಡಿರುವುದಲ್ಲದೆ ಆ ಬಗ್ಗೆ ಪ್ರಚಾರ ಮಾಧ್ಯಮಗಳಲ್ಲೂ ಕೆಲವೊಂದು ಬಾರಿ ವರದಿಯಾಗಿರುತ್ತದೆ.

ಮೇಲ್ಕಂಡದ್ದನ್ನು ಗಮನಿಸಿದ ಸರ್ಕಾರ ಈ ಎಲ್ಲವುಗಳಿಗೆ ಕಡಿವಾಣ ಹಾಕಿ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳಲ್ಲಿ ಸುಧಾರಣೆ ತರಬೇಕಾದ ಅವಶ್ಯಕತೆಯ ಬಗ್ಗೆ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆರವರ ಅಧ್ಯಕ್ಷತೆಯಲ್ಲಿ ದಿನಾಂಕ: 11–07–08ರಂದು ಸಭೆ ನಡೆದು ವಿಷಯವನ್ನು ಪೂರ್ಣವಾಗಿ ಚರ್ಚಿಸಿತು. ಈ ರೀತಿ ನಡೆದ ಚರ್ಚೆಯಲ್ಲಿ ಈ ಎಲ್ಲ ನ್ಯೂನತೆಗಳಿಗೆ ಮುಖ್ಯ ಕಾರಣ ಆಹಾರ ಪದಾರ್ಥಗಳ ಸರಬರಾಜನ್ನು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ವಾರ್ಷಿಕವಾಗಿ ಟೆಂಡರ್ ಕರೆದು ಸರಬರಾಜು ಮಾಡುತ್ತಿರುವ ಪದ್ಧತಿಯಿಂದ ಉಂಟಾಗಿದ್ದು, ಇದರಿಂದ ಸದರಿ ವಿದ್ಯಾರ್ಥಿಗಳಿಗೆ ಸಕಾಲಕ್ಕೆ ಸರಿಯಾಗಿ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳು ಸ್ಪರ್ಧಾತ್ಮಕ ದರದಲ್ಲಿ ಸರಬರಾಜಾಗದೇ ಇರುವುದರಿಂದ ತೊಂದರೆಯಾಗುತ್ತಿದೆ ಎಂಬುವುದನ್ನು ಪರಿಗಣಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಳ್ಳಲಾಗಿದೆ.

1. ಮೇಲ್ಕಂಡ ಪದ್ಧತಿಯನ್ನು ರದ್ದುಪಡಿಸಿ ಒಳ್ಳೆಯ ಗುಣಮಟ್ಟದ ತಾಜಾ ಆಹಾರ ಪದಾರ್ಥಗಳನ್ನು ಪೂರೈಸಲು ಅನುವಾಗುವಂತೆ ಎಲ್ಲಾ ಕಡೆ ಒಂದೊಂದು ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳನ್ನು ಒಂದು ಘಟಕ ಎಂದು ಪರಿಗಣಿಸಿ, ಅವುಗಳಿಗೆ ಬೇಕಾಗುವ ಆಹಾರ ಪದಾರ್ಥಗಳಲ್ಲಿ ರಿಯಾಯಿತಿ

ದರದಲ್ಲಿ ಪೂರೈಕೆಯಾಗುವ ನಿಯಂತ್ರಿತ ಆಹಾರ ಪದಾರ್ಥಗಳನ್ನು ಹೊರತು ಪಡಿಸಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಅನ್ವಯ ರೂ.1.00 ಲಕ್ಷದ ಮಿತಿಯೊಳಗೆ ಉಳಿದ ಆಹಾರ ಧಾನ್ಯಗಳನ್ನು ಪೂರೈಸಲು ನಿಯಮಾನುಸಾರ ಒಂದು, ಎರಡು ಅಥವಾ ಮೂರು ತಿಂಗಳಿಗೊಮ್ಮೆ ದರಪಟ್ಟಿ ಕರೆದು, ಕಡಿಮೆ ದರ ನಮೂದಿಸಿದ ದರಪಟ್ಟಿದಾರರಿಂದ ಪೂರೈಕೆ ಮಾಡಿಸುವ ಕೆಲಸವನ್ನು ಆಯಾ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಮೇಲ್ವಿಚಾರಕರು/ ಅಧೀಕ್ಷಕರುಗಳಿಗೆ ವಹಿಸುವುದು.

2. ಮೇಲ್ಕಂಡಂತೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಅಡಿಯಲ್ಲಿ ಸಾರ್ವಜನಿಕ ಸರಬರಾಜು ಮತ್ತು ಸಂಗ್ರಹಣೆಗಳಿಗೆ ಸಂಬಂಧಿಸಿದಂತೆ ವಿನಾಯ್ತಿ ನೀಡಿ ನಿಗದಿಪಡಿಸಿರುವ ರೂ.1.00 ಲಕ್ಷಗಳ ಮಿತಿಯಲ್ಲಿ ಆದೇಶ ಸಂಖ್ಯೆ: ಸಕಇ 34 ಬಿಸಿಎ 2004, ದಿನಾಂಕ:10–03–2005ರಲ್ಲಿ ಶೇ.50ರಷ್ಟು ಭಾಗದ ಸರಬರಾಜು ಹಕ್ಕನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಗುತ್ತಿಗೆದಾರರು/ ಸರಬರಾಜುದಾರರಿಗೆ ನೀಡುವುದನ್ನು ಕಟ್ಟುನಿಟ್ಟಾಗಿ ಪಾಲಿಸುವುದು.

3. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರಂತೆ ರೂ.1.00 ಲಕ್ಷ ಮೀರದ ಎಲ್ಲಾ ಸರಬರಾಜುಗಳಿಗೆ ಮೇಲ್ವಿಚಾರಕರು/ಅಧೀಕ್ಷಕರು ತಪ್ಪದೇ ಕೊಟೇಶನ್ ಕರೆದು ಆಹಾರ ಸರಬರಾಜು ಮಾಡುವಂತೆ ಮತ್ತು ಆಹಾರಧಾನ್ಯಗಳನ್ನು ಸರಬರಾಜು ಮಾಡಿದ್ದಕ್ಕೆ ಹಾಗೂ ಅವುಗಳನ್ನು ಉಪಯೋಗಿಸಿದ್ದಕ್ಕೆ ಸಂಬಂಧಿಸಿದಂತೆ ಆಯಾ ಮೇಲ್ವಿಚಾರಕರು/ಅಧೀಕ್ಷಕರು ಸೂಕ್ತ ಲೆಕ್ಕಪತ್ರಗಳನ್ನು ಇಟ್ಟು, ಪ್ರಸ್ತುತ ಅನುಸರಿಸುತ್ತಿರುವ ವಿಧಾನದಂತೆ ಬಿಲ್‌ಗಳನ್ನು ಪಾವತಿಗಾಗಿ ಹಣ ಸೆಳೆಯುವ ಅಧಿಕಾರಿಗಳಿಗೆ ಕಳುಹಿಸುವುದು.

4. ಈ ಕಾರ್ಯಕ್ರಮದಲ್ಲಿ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳನ್ನು ಒಂದು ಪ್ರತ್ಯೇಕ ಘಟಕ ಎಂದು ಪರಿಗಣಿಸಿರುವುದರಿಂದ ಅದು ಒಂದು ಜವಾಬ್ದಾರಿಯುತವಾದ ಕೇಂದ್ರವಾಗಿದ್ದು ಅಲ್ಲಿನ ಮೇಲ್ವಿಚಾರಕರು/ ಅಧೀಕ್ಷಕರುಗಳು ಹೆಚ್ಚಿನ ಜವಾಬ್ದಾರಿ ಹೊಂದಿದ್ದು, ಅಲ್ಲಿ ನಡೆಯುವ ಆಹಾರ ಸರಬರಾಜು, ಲೆಕ್ಕಪತ್ರ ನಿರ್ವಹಣೆ ವಿದ್ಯಾರ್ಥಿನಿಲಯ/ಶಾಲೆಗಳ ನಿರ್ವಹಣೆ ಎಲ್ಲದಕ್ಕೂ ಅವರನ್ನೇ ಜವಾಬ್ದಾರರನ್ನಾಗಿ ಮಾಡಲು ಹಾಗೂ ಈ ಆದೇಶ ಹೊರಡಿಸಿದಂದು ಯಾವುದಾದರೂ ಜಿಲ್ಲೆಗಳಲ್ಲಿ ಹಿಂದೆ ನೀಡಿದ್ದ ಆಹಾರ ಸರಬರಾಜಿನ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದಲ್ಲಿ, ಕೂಡಲೇ ಈ ಹೊಸ ಪದ್ಧತಿಯನ್ನು ಜಾರಿಗೆ ತರಲು ಹಾಗೊಮ್ಮೆ ಮುಕ್ತಾಯಗೊಳ್ಳದೇ ಇದ್ದಲ್ಲಿ, ಸದರಿ ಗುತ್ತಿಗೆ ಅವಧಿ ಮುಕ್ತಾಯವಾದ ಕೂಡಲೇ ಜಾರಿಗೆ ತರುವುದು.

5. ಮೇಲ್ಕಂಡ ಆಹಾರಧಾನ್ಯಗಳ ಪೂರೈಕೆ ವ್ಯವಸ್ಥೆಯ ಉಸ್ತುವಾರಿ ನೋಡಿಕೊಳ್ಳಲು ಆಯಾ ತಾಲ್ಲೂಕು ಪಂಚಾಯ್ತಿಗಳ ಕಾರ್ಯ ನಿರ್ವಹಣಾಧಿಕಾರಿಗಳನ್ನು ಅಧ್ಯಕ್ಷರನ್ನಾಗಿ, ಸಂಬಂಧಪಟ್ಟ ಇಲಾಖೆಯ ತಾಲ್ಲೂಕು ಅಧಿಕಾರಿಗಳು, ವಿದ್ಯಾರ್ಥಿನಿಲಯ/ ವಸತಿ/ ಆಶ್ರಮ ಶಾಲೆಗಳ ನಿವಾಸಿಗಳ ಇಬ್ಬರು ಪೋಷಕರು, ವಿದ್ಯಾರ್ಥಿನಿಲಯ/ ವಸತಿ/ ಆಶ್ರಮ ಶಾಲೆಗಳ ಹತ್ತಿರ ಬರುವ ಶಾಲೆಯ ಮುಖ್ಯೋಪಾಧ್ಯಾಯರುಗಳನ್ನು ಸದಸ್ಯರುಗಳನ್ನಾಗಿ ಮತ್ತು ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ಮೇಲ್ವಿಚಾರಕರು/ಅಧೀಕ್ಷಕರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಮಾಡಿ ತಾಲ್ಲೂಕು/ನಗರ/ಪಟ್ಟಣಗಳ ಮಟ್ಟದಲ್ಲಿ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಉಸ್ತುವಾರಿ ಸಮಿತಿ ರಚಿಸಲು ಹಾಗೂ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿ/ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿಗಳನ್ನು ಅಧ್ಯಕ್ಷರನ್ನಾಗಿ, ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ಹತ್ತಿರ ಬರುವ ಶಾಲೆಯ ಮುಖ್ಯೋಪಾಧ್ಯಾಯರು, ವಿದ್ಯಾರ್ಥಿನಿಲಯದ ನಿವಾಸಿಗಳ ಇಬ್ಬರು ಪೋಷಕರುಗಳನ್ನು ಸದಸ್ಯರನ್ನಾಗಿ ಹಾಗೂ ವಿದ್ಯಾರ್ಥಿನಿಲಯ/ ವಸತಿ/ ಆಶ್ರಮ ಶಾಲೆಗಳ ಮೇಲ್ವಿಚಾರಕರು/ ಅಧೀಕ್ಷಕರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ಮಾಡಿ ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಗ್ರಾಮಗಳ ವಿದ್ಯಾರ್ಥಿನಿಲಯ ಉಸ್ತುವಾರಿ ಸಮಿತಿಗಳನ್ನು ಕ್ರಮವಾಗಿ ಇಲಾಖಾ ಮುಖ್ಯಸ್ಥರುಗಳು ಹಾಗೂ ಜಿಲ್ಲಾ ಅಧಿಕಾರಿಗಳು ರಚಿಸುವುದು.

ವಿಷಯವನ್ನು ಪರಿಶೀಲಿಸಿದ ಸರ್ಕಾರ ಮೇಲ್ಕಂಡ ಸಭೆಯ ತೀರ್ಮಾನಗಳನ್ನು ಅನುಷ್ಠಾನಗೊಳಿಸುವುದು ಉಚಿತ ಎಂದೆಣಿಸಿ ಈ ಆದೇಶ.

**ಆದೇಶ ಸಂಖ್ಯೆ: ಸಕಇ 123 ಸಮನ್ವಯ 2008 ಬೆಂಗಳೂರು, ದಿನಾಂಕ: 16ನೇ ಜುಲೈ 2008**

ಸುತ್ತೋಲೆ ಸಂಖ್ಯೆ: ಸಕಇ 315 ಪಕವಿ 2001, ದಿ:07–07–2001ನ್ನು ರದ್ದುಪಡಿಸುತ್ತ, ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಗಳ ಅಧೀನದಲ್ಲಿ ಬರುವ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳಲ್ಲಿನ ನಿರ್ವಹಣೆ, ಆಹಾರ ಸರಬರಾಜಿನ ನ್ಯೂನತೆಗಳನ್ನು ಸರಿಪಡಿಸಿ, ಸರಳೀಕರಣಗೊಳಿಸಲು ಅನುವಾಗುವಂತೆ ಸರ್ಕಾರ ರಿಯಾಯ್ತಿ ದರದಲ್ಲಿ ಪೂರೈಸುವ ನಿಯಂತ್ರಿತ ಆಹಾರ ಧಾನ್ಯಗಳನ್ನು ಹೊರತು ಪಡಿಸಿದಂತೆ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರಲ್ಲಿ ವಿನಾಯ್ತಿ ನೀಡಿರುವ ರೂ.1.00 ಲಕ್ಷಗಳ ಮಿತಿಯೊಳಗೆ ಉಳಿದ ಆಹಾರ ಧಾನ್ಯ, ತರಕಾರಿ, ಮೊಟ್ಟೆ ವಗೈರೆಗಳ ಸರಬರಾಜು ಮಾಡುವ ಕೆಲಸವನ್ನು ಎರಡು ಅಥವಾ ಮೂರು ತಿಂಗಳಿಗೊಮ್ಮೆ ದರಪಟ್ಟಿದಾರರಿಂದ ನಿಯಮಾನುಸಾರ ದರಪಟ್ಟಿ ಕರೆದು, ಅವುಗಳಲ್ಲಿ ಕಡಿಮೆ ದರ ನಮೂದಿಸಿದ ದರಪಟ್ಟಿದಾರರಿಗೆ ವಹಿಸುವ ಕೆಲಸವನ್ನು ಆಯಾ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಮೇಲ್ವಿಚಾರಕರು/ಅಧೀಕ್ಷಕರುಗಳಿಗೆ ಕೂಡಲೇ ಜಾರಿಗೆ ಬರುವಂತೆ ವಹಿಸಿ ಆದೇಶಿಸಲಾಗಿದೆ.

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ, 1999ರಂತೆ ಒಂದು ಲಕ್ಷ ಮೀರಿದ ಸರಬರಾಜುಗಳಿಗೆ ಸಂಬಂಧಿಸಿದ ಪ್ರಕರಣಗಳಲ್ಲಿ ಪ್ರಸ್ತುತ ಅನುಸರಿಸುತ್ತಿರುವ ವಿಧಾನವನ್ನೇ ಅನುಸರಿಸತಕ್ಕದ್ದು.

ಆಹಾರಧಾನ್ಯಗಳನ್ನು ಸರಬರಾಜು ಮಾಡಿದ್ದಕ್ಕೆ ಹಾಗೂ ಅವುಗಳನ್ನು ಉಪಯೋಗಿಸಿದ್ದಕ್ಕೆ ಸಂಬಂಧಿಸಿದಂತೆ ಆಯಾ ಮೇಲ್ವಿಚಾರಕರ/ಅಧೀಕ್ಷಕರು ಸೂಕ್ತ ಲೆಕ್ಕಪತ್ರಗಳನ್ನು ಇಟ್ಟು, ಪ್ರಸ್ತುತ ಅನುಸರಿಸುತ್ತಿರುವ ವಿಧಾನದಂತೆ ನಿಯಮಾನುಸಾರ ಬಿಲ್‌ಗಳನ್ನು ಪಾವತಿಗಾಗಿ ಹಣ ಸೆಳೆಯುವ ಅಧಿಕಾರಿಗಳಿಗೆ ಮಂಡಿಸತಕ್ಕದ್ದು.

ಈ ಕಾರ್ಯಕ್ರಮದಲ್ಲಿ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳನ್ನು ಒಂದು ಪ್ರತ್ಯೇಕ ಘಟಕ ಎಂದು ಪರಿಗಣಿಸಿರುವುದರಿಂದ, ಅದು ಒಂದು ಜವಾಬ್ದಾರಿಯುತವಾದ ಕೇಂದ್ರವಾಗಿದ್ದು, ಅಲ್ಲಿನ ಮೇಲ್ವಿಚಾರಕರು/ ಅಧೀಕ್ಷಕರುಗಳು ಹೆಚ್ಚಿನ ಜವಾಬ್ದಾರಿ ಹೊಂದಿದ್ದು, ಅಲ್ಲಿ ನಡೆಯುವ ಆಹಾರ ಸರಬರಾಜು, ಲೆಕ್ಕಪತ್ರ ನಿರ್ವಹಣೆ ವಿದ್ಯಾರ್ಥಿನಿಲಯ/ಶಾಲೆಗಳ ನಿರ್ವಹಣೆ ಎಲ್ಲದಕ್ಕೂ ಅವರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶ ಹೊರಡಿಸಿದಂದು ಯಾವುದಾದರೂ ಜಿಲ್ಲೆಗಳಲ್ಲಿ ಹಿಂದೆ ನೀಡಿದ್ದ ಆಹಾರ ಸರಬರಾಜಿನ ಗುತ್ತಿಗೆ ಅವಧಿ ಪೂರ್ಣಗೊಂಡಿದ್ದಲ್ಲಿ, ಕೂಡಲೇ ಈ ಹೊಸ ಪದ್ಧತಿಯನ್ನು ಜಾರಿಗೆ ತರಲು ಹಾಗೊಮ್ಮೆ ಮುಕ್ತಾಯಗೊಳ್ಳದೇ ಇದ್ದಲ್ಲಿ, ಸದರಿ ಗುತ್ತಿಗೆ ಅವಧಿ ಮುಕ್ತಾಯವಾದ ಕೂಡಲೇ ಜಾರಿಗೆ ತರಲು ಆದೇಶಿಸಲಾಗಿದೆ.

ಮೇಲ್ಕಂಡ ವ್ಯವಸ್ಥೆಯ ಉಸ್ತುವಾರಿ ನೋಡಿಕೊಳ್ಳಲು ಇಲಾಖಾ ಮುಖ್ಯಸ್ಥರುಗಳು ಹಾಗೂ ಜಿಲ್ಲಾ ಅಧಿಕಾರಿಗಳು ಕ್ರಮವಾಗಿ ಈ ಕೆಳಕಂಡಂತೆ ತಾಲ್ಲೂಕು, ನಗರ, ಪಟ್ಟಣ ಮಟ್ಟದ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಸಮಿತಿಗಳನ್ನು ಹಾಗೂ ಜಿಲ್ಲಾ ಅಧಿಕಾರಿಗಳು ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಗ್ರಾಮಗಳ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಸಮಿತಿಗಳನ್ನು ರಚಿಸಲು ಕೂಡಲೆ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

**ಅ) ತಾಲ್ಲೂಕು/ನಗರ/ಪಟ್ಟಣಗಳ ಮಟ್ಟದ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳ ಉಸ್ತುವಾರಿ ಸಮಿತಿ:**

1. ಕಾರ್ಯನಿರ್ವಹಣಾಧಿಕಾರಿಗಳು, ತಾಲ್ಲೂಕು ಪಂಚಾಯತ್ –ಅಧ್ಯಕ್ಷರು
2. ಆಯಾ ಇಲಾಖೆಗಳ ತಾಲ್ಲೂಕು ಅಧಿಕಾರಿಗಳು –ಸದಸ್ಯರು
3. ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ನಿವಾಸಿಗಳ ಇಬ್ಬರು ಪೋಷಕರು –ಸದಸ್ಯರು
4. ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ಹತ್ತಿರ ಬರುವ ಶಾಲೆಯ ಮುಖ್ಯೋಪಾಧ್ಯಾಯರು –ಸದಸ್ಯರು
5. ವಿದ್ಯಾರ್ಥಿನಿಯ/ವಸತಿ/ಆಶ್ರಮ ಶಾಲೆಯ ಮೇಲ್ವಿಚಾರಕರು/ ಅಧೀಕ್ಷಕರು –ಸದಸ್ಯ ಕಾರ್ಯದರ್ಶಿ

**ಆ) ಗ್ರಾಮ ಪಂಚಾಯ್ತಿ ವ್ಯಾಪ್ತಿಯ ಗ್ರಾಮಗಳ ವಿದ್ಯಾರ್ಥಿನಿಲಯ, ವಸತಿ/ಆಶ್ರಮ ಶಾಲೆ ಸಮಿತಿ:**

1. ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು/ಹಿಂದುಳಿದ ವರ್ಗಗಳ ವಿಸ್ತರಣಾಧಿಕಾರಿ –ಅಧ್ಯಕ್ಷರು
2. ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ಹತ್ತಿರ ಬರುವ ಶಾಲೆಯ ಮುಖ್ಯೋಪಾಧ್ಯಾಯರು –ಸದಸ್ಯರು
3. ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ನಿವಾಸಿಗಳ ಇಬ್ಬರು ಪೋಷಕರು –ಸದಸ್ಯರು

4. ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಯ ಮೇಲ್ವಿಚಾರಕರು/ ಅಧೀಕ್ಷಕರು –ಸದಸ್ಯ–ಕಾರ್ಯದರ್ಶಿ

ಮೇಲ್ಕಂಡ ಸಮಿತಿ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳಿಗೆ ಉತ್ತಮ ಗುಣಮಟ್ಟದ ಆಹಾರ ಪದಾರ್ಥಗಳು ಕ್ರಮವಾಗಿ ಸರಬರಾಜಾಗುತ್ತಿರುವ ಬಗ್ಗೆ ಹಾಗೂ ವಿದ್ಯಾರ್ಥಿನಿಲಯ/ವಸತಿ/ಆಶ್ರಮ ಶಾಲೆಗಳು ಸುಸೂತ್ರವಾಗಿ ನಡೆಯುತ್ತಿರುವ ಬಗ್ಗೆ ಕನಿಷ್ಟ ಪಕ್ಷ ಎರಡು ತಿಂಗಳಿಗೊಮ್ಮೆ ಸಭೆ ಸೇರಿ ಪರಿವೀಕ್ಷಣೆ ನಡೆಸುವುದು. ಸದರಿ ಸಭೆ/ಪರಿವೀಕ್ಷಣೆಗಳಲ್ಲಿ ಕೈಗೊಂಡ ತೀರ್ಮಾನಗಳ ಬಗ್ಗೆ ನಡವಳಿ ಒಂದನ್ನು ಅದೇ ಸಭೆಯಲ್ಲಿ ಲಿಖಿತವಾಗಿ ದಾಖಲಿಸಿ, ಅವುಗಳನ್ನು ಅನುಷ್ಠಾನಗೊಳಿಸುವುದು, ಸದರಿ ತೀರ್ಮಾನಗಳು ಅನುಷ್ಠಾನಗೊಂಡಿರುವ ಬಗ್ಗೆ ಖಚಿತಪಡಿಸಿಕೊಳ್ಳಲು ಅಗತ್ಯಬಿದ್ದಲ್ಲಿ ಹೆಚ್ಚಿನ ತಪಾಸಣೆಗಳನ್ನು ಕೈಗೊಳ್ಳತಕ್ಕದ್ದು.

ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯಿತಿ ಹಾಗೂ ಕಾರ್ಯನಿರ್ವಹಕ ಅಧಿಕಾರಿಗಳು, ತಾಲ್ಲೂಕು ಪಂಚಾಯಿತಿಗಳು ಈ ಯೋಜನೆ ಶೀಘ್ರ ಕಾರ್ಯಗತಗೊಂಡು ಜಾರಿಗೆ ಬರುವಂತಾಗಲು ಎಲ್ಲಾ ಅವಶ್ಯಕ ಕ್ರಮಗಳನ್ನು ಕೈಗೊಳ್ಳತಕ್ಕದ್ದು.

ಆಯವ್ಯಯ, ಲೆಕ್ಕ ಶೀರ್ಷಿಕೆ, ಬಿಲ್ಲು ಸಲ್ಲಿಸುವಿಕೆ, ಅದನ್ನು ಪಾಸು ಮಾಡುವ, ಹಣ ಸೆಳೆಯುವ ಅಧಿಕಾರಗಳು ಈಗ ಹೇಗಿದೇಯೋ ಹಾಗೆ ಮುಂದುವರಿಯುತ್ತದೆ.

ಮೇಲೆ ಉಲ್ಲೇಖದಲ್ಲಿ ನಮೂದಿಸಿರುವ ರಾಜ್ಯ ಸರ್ಕಾರದ ಮತ್ತು ಭಾರತ ಸರ್ಕಾರದ ಆದೇಶ ಮತ್ತು ಸುತ್ತೋಲೆಗಳಲ್ಲಿನ ಪ್ರತಿಯೊಂದು ಸೂಚನೆಗಳು ಯಥಾ ಪ್ರಕಾರ ಈಗಲೂ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1094

**ಎಂ.ಎಂ. ಬಾಟಿ**

ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಮಾಜ ಕಲ್ಯಾಣ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ :** 2007–08ನೇ ಸಾಲಿಗೆ ರಾಜ್ಯವಲಯದಿಂದ ಜಿಲ್ಲಾ ವಲಯಕ್ಕೆ ವರ್ಗಾವಣೆಯಾದ ಕಾರ್ಯಕ್ರಮಗಳಡಿ ಉಪಕಾರ್ಯಕ್ರಮಗಳವಾರು ಅನುದಾನವನ್ನು ಜಿಲ್ಲಾವಾರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಯೋ(2):ಧ.ಸ.ಶು. ಮರುಪಾವತಿ–6/2006–07/ ದಿನಾಂಕ 8–8–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರದಲ್ಲಿ 2007–08ನೇ ಸಾಲಿನಲ್ಲಿ, ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ವರ್ಗಾಯಿಸಲಾದ

ಎ ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕ ಶೀರ್ಷಿಕೆ 2202–01–800–1–35ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

ಅ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ (6 ಮತ್ತು 7ನೇ ತರಗತಿ ಎಸ್.ಸಿ/ಎಸ್.ಟಿ. ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು) ಸರ್ಕಾರೇತರ ಶುಲ್ಕ ಮರುಪಾವತಿ.
ಆ. ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.
ಇ. ಹೊಸ ಬಿ.ಇ.ಓ. ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.
ಈ. ಅಕ್ಷರ ದಾಸೋಹ ಕಾರ್ಯಕ್ರಮ.

ಬಿ. ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

ಅ. ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣುಮಕ್ಕಳಿಗೆ
ಆ. ಸರ್ಕಾರೇತರ ಶುಲ್ಕ ಎಲ್ಲಾ ಸಾಮಾನ್ಯ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ./ಎಸ್.ಟಿ. ಗಂಡು ಮಕ್ಕಳಿಗೆ (8,9 ಮತ್ತು 10ನೇ ತರಗತಿ)

ಮೇಲ್ಕಂಡ ಎರಡು ಯೋಜನಾ ಕಾರ್ಯಕ್ರಮಗಳಿಗೆ ವಿವಿಧ ಜಿಲ್ಲೆಗಳಿಗೆ ಹಂಚಿಕೆ ಮಾಡಿ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 302 ಯೋಯೋಕ 2007, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್ 2007.**
**(ಇಡಿ 147 ಸ್ವೀಮರ (ಯುನಿಕ್) 2007, ದಿನಾಂಕ 9–10–2007)**

(3) 2007–08ನೇ ಸಾಲಿಗೆ ಜಿಲ್ಲಾ ಪಂಚಾಯತ್ ಕಾರ್ಯಕ್ರಮಗಳಿಗೆ ಲಿಂಕ್ ಡಾಕ್ಯುಮೆಂಟ್‌ನಲ್ಲಿ ಒದಗಿಸಲಾದ

ಎ. ಸಾರ್ವಜನಿಕ ಪ್ರಾಥಮಿಕ ಶಿಕ್ಷಣದ ಉತ್ತೇಜನಕ್ಕಾಗಿ ಚಟುವಟಿಕೆಗಳು ಲೆಕ್ಕಶೀರ್ಷಿಕೆ 2202–01–800–1–35ರಡಿಯಲ್ಲಿನ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಅನುಬಂಧ–1ರಲ್ಲಿ ತೋರಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

ಅ. ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ (6 ಮತ್ತು 7ನೇ ತರಗತಿ ಎಸ್.ಸಿ./ಎಸ್.ಟಿ. ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು) ಸರ್ಕಾರೇತರ ಶುಲ್ಕ ಮರುಪಾವತಿ.

ಆ. ಹೊಸ ಉಪನಿರ್ದೇಶಕರ ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

ಇ. ಹೊಸ ಬಿ.ಇ.ಓ. ಕಛೇರಿಗಳಿಗೆ ಬಾಡಿಗೆ ವಾಹನ ಸೌಲಭ್ಯ.

ಈ. ಅಕ್ಷರ ದಾಸೋಹ ಕಾರ್ಯಕ್ರಮ.

ಬಿ. ಧನಸಹಾಯ ಮತ್ತು ಫೀಜಿನ ಮರುಪಾವತಿ ಲೆಕ್ಕಶೀರ್ಷಿಕೆ 2202–02–800–1–05ರಡಿ ಈ ಕೆಳಕಂಡಂತೆ ಉಪಕಾರ್ಯಕ್ರಮಗಳಿಗೆ ಅನುಬಂಧ–2ರಲ್ಲಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದೆ.

ಅ. ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣುಮಕ್ಕಳಿಗೆ

ಆ. ಸರ್ಕಾರೇತರ ಶುಲ್ಕ ಎಲ್ಲಾ ಸಾಮಾನ್ಯ ಹೆಣ್ಣು ಮಕ್ಕಳಿಗೆ ಹಾಗೂ ಎಸ್.ಸಿ./ಎಸ್.ಟಿ. ಗಂಡು ಮಕ್ಕಳಿಗೆ (8,9 ಮತ್ತು 10ನೇ ತರಗತಿ)

(4) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

(5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 725 ಐಎಫ್(ಬಿಎ) 2007, ದಿನಾಂಕ 6–9–2007ರ ಅನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 302 ಯೋಯೋಕ 2007, ಬೆಂಗಳೂರು, ದಿನಾಂಕ: 9–10–2007ಕ್ಕೆ ಅನುಬಂಧ–1**

| ಜಿಲ್ಲೆಯ ಹೆಸರು | ಲಿಂಕ್‌ಡಾಕ್ಯುಮೆಂಟ್‌ನಲ್ಲಿ ಒದಗಿಸಲಾದ ಆಯವ್ಯಯ | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಸರ್ಕಾರೇತರ ಶುಲ್ಕ ಮರುಪಾವತಿ (6 ಮತ್ತು 7ನೇ ತರಗತಿ) ಎಸ್.ಸಿ./ ಎಸ್.ಟಿ., ಗಂಡು ಮಕ್ಕಳು ಮತ್ತು ಎಲ್ಲಾ ಹೆಣ್ಣು ಮಕ್ಕಳು | ಬಾಡಿಗೆ ವಾಹನ ಸೌಲಭ್ಯ (ಉಪ ನಿರ್ದೇಶಕರು ಗಳಿಗೆ) | ಬಾಡಿಗೆ ವಾಹನ ಸೌಲಭ್ಯ (ಬಿ.ಇ.ಓ.) ಗಳಿಗೆ | ಅಕ್ಷರ ದಾಸೋಹ |
|---|---|---|---|---|---|
| 1 | 2 | 3 | 4 | 5 | 6 |
| ಬಾಗಲಕೋಟೆ | 1149.41 | 11.00 | 0.00 | 0 | 1138.41 |
| ಬೆಂ. ಉತ್ತರ | 1062.00 | 32.53 | 0.00 | 2.88 | 1026.59 |
| ಬೆಂ. ದಕ್ಷಿಣ | 0.00 | 0.00 | 0.00 | 0 | 0.00 |
| ಬೆಂ. ಗ್ರಾಮಾಂತರ | 1271.00 | 11.49 | 0.00 | 0 | 1259.51 |
| ಬೆಳಗಾಂ | 2123.88 | 25.85 | 1.80 | 2.88 | 2093.35 |
| ಬೆಳಗಾಂ ಉತ್ತರ ಚಿಕ್ಕೋಡಿ | 0.00 | 0.00 | 0.00 | 0 | 0.00 |
| ಬಳ್ಳಾರಿ | 1550.76 | 14.05 | 0.00 | 1.44 | 1535.27 |
| ಬೀದರ್ | 1430.02 | 12.17 | 0.00 | 0 | 1417.85 |
| ಬಿಜಾಪುರ | 1583.14 | 12.34 | 0.00 | 1.44 | 1569.36 |
| ಚಾಮರಾಜನಗರ | 625.42 | 5.83 | 0.00 | 1.44 | 618.15 |

| 1 | 2 | 3 | 4 | 5 | 6 |
|---|---|---|---|---|---|
| ಚಿಕ್ಕಬಳ್ಳಾಪುರ | 0.00 | 0.00 | 0.00 | 0 | 0.00 |
| ಚಿಕ್ಕಮಗಳೂರು | 779.42 | 6.42 | 0.00 | 1.44 | 771.56 |
| ಚಿತ್ರದುರ್ಗ | 1190.00 | 13.17 | 0.00 | 0 | 1176.83 |
| ದಕ್ಷಿಣ ಕನ್ನಡ | 933.23 | 11.03 | 0.00 | 0 | 922.20 |
| ದಾವಣಗೆರೆ | 1102.56 | 13.17 | 0.00 | 0 | 1089.39 |
| ಧಾರವಾಡ | 1025.00 | 6.57 | 0.00 | 0 | 1018.43 |
| ಗದಗ | 719.00 | 6.62 | 0.00 | 0 | 712.38 |
| ಗುಲ್ಬರ್ಗಾ | 2589.03 | 16.50 | 1.80 | 1.44 | 2569.29 |
| ಹಾಸನ | 1170.00 | 6.42 | 0.00 | 0 | 1163.58 |
| ಹಾವೇರಿ | 1100.00 | 9.73 | 0.00 | 0 | 1090.27 |
| ಕೊಡಗು | 300.37 | 2.72 | 0.00 | 0 | 294.14 |
| ಕೋಲಾರ | 1839.58 | 18.18 | 1.80 | 0 | 1819.60 |
| ಕೊಪ್ಪಳ | 1064.47 | 6.82 | 0.00 | 0 | 1046.21 |
| ಮಧುಗಿರಿ | 0.00 | 0.00 | 0.00 | 0 | 0.00 |
| ಮಂಡ್ಯ | 1000.00 | 9.37 | 0.00 | 1.44 | 989.19 |
| ಮೈಸೂರು | 1477.45 | 5.83 | 0.00 | 1.44 | 1470.18 |
| ರಾಯಚೂರು | 1360.63 | 9.50 | 0.00 | 0 | 1351.13 |
| ಶಿವಮೊಗ್ಗ | 1100.00 | 10.27 | 0.00 | 0 | 1089.73 |
| ತುಮಕೂರು | 1768.03 | 15.69 | 0.00 | 0 | 1752.34 |
| ಉಡುಪಿ | 513.00 | 6.20 | 0.00 | 1.44 | 505.36 |
| ಉತ್ತರ ಕನ್ನಡ | 1190.00 | 7.57 | 0.00 | 0 | 1182.43 |
| ಯಾದಗಿರಿ | 0.00 | 0.00 | 0.00 | 0 | 0.00 |
| ಹಾಸನ | 1170.00 | 6.42 | 0.00 | 0 | 1163.58 |
| ಹಾವೇರಿ | 1100.00 | 9.73 | 0.00 | 0 | 1090.27 |
| ಕೊಡಗು | 300.37 | 2.72 | 0.00 | 0 | 294.14 |
| ಕೋಲಾರ | 1839.58 | 18.18 | 1.80 | 0 | 1819.60 |
| ಕೊಪ್ಪಳ | 1064.47 | 6.82 | 0.00 | 0 | 1046.21 |
| ಮಧುಗಿರಿ | 0.00 | 0.00 | 0.00 | 0 | 0.00 |
| **ಒಟ್ಟು** | **33017.40** | **307.04** | **5.40** | **17.28** | **32687.68** |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ

**ಸರ್ಕಾರಿ ತಿದ್ದುಪಡಿ ಆದೇಶ ಸಂಖ್ಯೆ: ಇಡಿ 302 ಯೋಸಕ 2007, ಬೆಂಗಳೂರು, ದಿನಾಂಕ: 9–10–2007ಕ್ಕೆ ಅನುಬಂಧ–2**

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಜಿಲ್ಲೆಯ ಹೆಸರು | ಲಿಂಕ್‌ಡಾಕ್ಯುಮೆಂಟ್‌ನಲ್ಲಿ ಒದಗಿಸಲಾದ ಆಯವ್ಯಯ | ಎಸ್.ಎಸ್.ಎಲ್.ಸಿ. ಪಬ್ಲಿಕ್ ಪರೀಕ್ಷಾ ಶುಲ್ಕ ಮರುಪಾವತಿ ಎಲ್ಲಾ ಹೆಣ್ಣು ಮಕ್ಕಳಿಗೆ | ಸರ್ಕಾರೇತರ ಶುಲ್ಕ ಎಲ್ಲಾ ಹೆಣ್ಣು ಮಕ್ಕಳು ಹಾಗೂ ಎಸ್.ಸಿ./ಎಸ್.ಟಿ. ಗಂಡು ಮಕ್ಕಳು (8,9 ಮತ್ತು 10ನೇ ತರಗತಿ) |
|---|---|---|---|---|
| 1 | 2 | 3 | 4 | 5 |
| 1 | ಬಾಗಲಕೋಟೆ | 14.56 | 1.36 | 13.20 |
| 2 | ಬೆಂಗಳೂರು ಉತ್ತರ | 52.00 | 13.50 | 38.50 |

| 1 | 2 | 3 | 4 | 5 |
|---|---|---|---|---|
| 3 | ಬೆಂಗಳೂರು ದಕ್ಷಿಣ | 0.00 | 0.00 | 0.00 |
| 4 | ಬೆಂಗಳೂರು ಗ್ರಾಮಾಂತರ | 59.51 | 29.81 | 29.70 |
| 5 | ಬೆಳಗಾಂ | 46.75 | 11.55 | 35.20 |
| 6 | ಬೆಳಗಾಂ ಉತ್ತರ ಚಿಕ್ಕೋಡಿ | 0.00 | 0.00 | 0.00 |
| 7 | ಬಳ್ಳಾರಿ | 39.70 | 15.50 | 24.20 |
| 8 | ಬೀದರ್ | 45.00 | 28.50 | 16.50 |
| 9 | ಬಿಜಾಪುರ | 33.90 | 10.80 | 23.10 |
| 10 | ಚಾಮರಾಜನಗರ | 16.50 | 0.00 | 16.50 |
| 11 | ಚಿಕ್ಕಬಳ್ಳಾಪುರ | 0.00 | 0.00 | 0.00 |
| 12 | ಚಿಕ್ಕಮಗಳೂರು | 40.00 | 22.40 | 17.60 |
| 13 | ಚಿತ್ರದುರ್ಗ | 32.70 | 15.10 | 17.60 |
| 14 | ದಕ್ಷಿಣ ಕನ್ನಡ | 62.00 | 26.80 | 35.20 |
| 15 | ದಾವಣಗೆರೆ | 27.35 | 2.05 | 25.30 |
| 16 | ಧಾರವಾಡ | 13.41 | 2.41 | 11.00 |
| 17 | ಗದಗ | 25.72 | 16.92 | 8.80 |
| 18 | ಗುಲ್ಬರ್ಗಾ | 80.67 | 56.47 | 24.20 |
| 19 | ಹಾಸನ | 40.00 | 9.20 | 30.80 |
| 20 | ಹಾವೇರಿ | 30.50 | 17.30 | 13.20 |
| 21 | ಕೊಡಗು | 8.00 | 3.60 | 4.40 |
| 22 | ಕೋಲಾರ | 63.64 | 21.84 | 41.80 |
| 23 | ಕೊಪ್ಪಳ | 30.00 | 12.40 | 17.60 |
| 24 | ಮಧುಗಿರಿ | 0.00 | 0.00 | 0.00 |
| 25 | ಮಂಡ್ಯ | 70.00 | 34.80 | 35.20 |
| 26 | ಮೈಸೂರು | 75.00 | 33.20 | 41.80 |
| 27 | ರಾಯಚೂರು | 25.00 | 3.00 | 22.00 |
| 28 | ಶಿವಮೊಗ್ಗ | 43.16 | 17.86 | 25.30 |
| 29 | ತುಮಕೂರು | 35.00 | 5.30 | 29.70 |
| 30 | ಉಡುಪಿ | 34.01 | 8.71 | 25.30 |
| 31 | ಉತ್ತರ ಕನ್ನಡ | 20.42 | 3.92 | 16.50 |
| 32 | ಯಾದಗಿರಿ | 0.00 | 0.00 | 0.00 |
| | **ಒಟ್ಟು** | **1064.50** | **424.30** | **640.20** |

**ಕೆ. ಶ್ರೀಕಂಠೇಶ್ವರ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ),
ಶಿಕ್ಷಣ ಇಲಾಖೆ

ಪಿ.ಆರ್.227

**ವಿಷಯ :** ಕೆ.ಎ.ಟಿ. ಅರ್ಜಿ ಸಂಖ್ಯೆ 3670/2007 – ಶ್ರೀ ಆರ್. ಸಿದ್ದರಾಮಯ್ಯ, ಬೆಂಗಳೂರು – ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರು – ಅರ್ಹತಾ ದಿನಾಂಕ ನಿಗಧಿಪಡಿಸುವ – ಪೂರ್ವಾನ್ವಯ ಬಡ್ತಿ ಬಗ್ಗೆ.

**ಓದಲಾಗಿದೆ:** 1. ಕೆ.ಎ.ಟಿ. ಅರ್ಜಿ ಸಂಖ್ಯೆ 3670/2007, ದಿನಾಂಕ 13–8–2007ರ ಆದೇಶ.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ1(6)ದೈ/ಶಿ/ಪೂ.ಬಡ್ತಿ–01/2007–08, ದಿನಾಂಕ 15–10–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿ ಶ್ರೀ ಆರ್. ಸಿದ್ದರಾಮಯ್ಯ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು, (ನಿವೃತ್ತ) ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಕರ್ನಾಟಕ ಆಡಳಿತ

ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 3670/2007ನ್ನು ಸಲ್ಲಿಸಿ, ತಮಗೆ ದಿನಾಂಕ 18–7–1996ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅರ್ಹತಾ ದಿನಾಂಕವನ್ನು ನಿಗಧಿಪಡಿಸಿ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರ ಹುದ್ದೆಯಲ್ಲಿ ಅವರಿಗಿಂತ ಸೇವೆಯಲ್ಲಿ ಕಿರಿಯರಾದವರಿಗೆ ನೀಡಿದಂತೆ ಸೌಲಭ್ಯಗಳನ್ನು ಒದಗಿಸುವಂತೆ ನಿರ್ದೇಶನ ನೀಡುವಂತೆ ಕೋರಿದ್ದು, ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯು, ಸದರಿ ಅರ್ಜಿಯಲ್ಲಿ ದಿನಾಂಕ 13–8–2007ರಂದು ತೀರ್ಪು ನೀಡಿ, ಈ ಕೆಳಕಂಡಂತೆ ಆದೇಶಿಸಿದೆ:

(i) The Application is disposed off;

(ii) The first respondent is directed to consider the grievance of the applicant set-forth in his representations dated 30-9-2006 and 23-2-2007 (Annexures-A6 and A7 respectively) and pass appropriate orders in accordance with law within a period of three months from the date a certified copy of this order is received by the first respondent.

ಮೇಲೆ ಓದಲಾದ (2)ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀ ಆರ್. ಸಿದ್ದರಾಮಯ್ಯ ರವರನ್ನು ಒಳಗೊಂಡಂತೆ ಇತರೆ 26 ದೈಹಿಕ ಶಿಕ್ಷಣ ಅಧೀಕ್ಷಕರುಗಳಿಗೆ ಪೂರ್ವಾನ್ವಯ ಬಡ್ತಿ ನೀಡಲು ಪ್ರಸ್ತಾಪಿಸಿರುವರು.

ಆಯುಕ್ತರು, ಪ್ರಸ್ತಾಪಿಸಿರುವಂತೆ ನಿವೃತ್ತ ಅಧಿಕಾರಿಯಾದ ಶ್ರೀ ಆರ್. ಸಿದ್ದರಾಮಯ್ಯ, ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ 3670/2007ರಲ್ಲಿ ನೀಡಿರುವ ತೀರ್ಪನ್ನು ಅನುಷ್ಠಾನಗೊಳಿಸುವ ಬಗ್ಗೆ ಆಯುಕ್ತರು ಹಾಜರುಪಡಿಸಿದ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಲಾಗಿದೆ.

ಶ್ರೀ ಎಲ್. ಮರಿಸ್ವಾಮಿ ಅವರು ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರ ಹುದ್ದೆಗೆ ಬಡ್ತಿ ನೀಡುವ ಸಂದರ್ಭದಲ್ಲಿ ಶ್ರೀ ಆರ್. ಸಿದ್ದರಾಮಯ್ಯ ಅವರ ಹೆಸರನ್ನು ಪರಿಗಣಿಸಿರುವುದಿಲ್ಲ. ಏಕೆಂದರೆ ಶ್ರೀ ಎಲ್. ಮರಿಸ್ವಾಮಿ, ಪರಿಶಿಷ್ಟ ಜಾತಿಗೆ ಸೇರಿದ ಅಧಿಕಾರಿಯಾಗಿದ್ದು, ಅವರಿಗೆ ಮೀಸಲಾತಿಯನ್ವಯ ರೋಸ್ಟರ್ ಪದ್ದತಿಯನ್ನು ಅನುಸರಿಸಿ ಅವರಿಗೆ ಬಡ್ತಿ ನೀಡಿರುವುದು ಕಂಡುಬರುತ್ತದೆ. ಹಾಗಾಗಿ ಶ್ರೀ ಆರ್. ಸಿದ್ದರಾಮಯ್ಯ ಅವರು ಶ್ರೀ ಮರಿಸ್ವಾಮಿ ಅವರ ಜೇಷ್ಠತೆಯನ್ನು ಆಧರಿಸಿ, ಅವರಿಗೆ ಬಡ್ತಿ ನೀಡಿದ ದಿನಾಂಕವನ್ನು ತಮಗೂ ನೀಡಬೇಕೆಂದು ಕೋರಿರುವುದು ಜಾರಿಯಲ್ಲಿರುವ ಸ್ಥಾಯಿ ಆದೇಶಗಳಿಗನುಗುಣವಾಗಿರುವುದಿಲ್ಲ.

ಶ್ರೀ ಆರ್. ಸಿದ್ದರಾಮಯ್ಯ ಅವರಿಗಿಂತ ಸೇವೆಯಲ್ಲಿ ಹಿರಿಯರಾದ ಶ್ರೀ ಜಾರ್ಜ ಜೇಮ್ಸ್ ಅವರಿಗೆ ದಿನಾಂಕ 20–6–2005 ರಂದೇ ಸ್ಥಾನಪನ್ನ ಆಧಾರದ ಮೇಲೆ ಕೋರಿರುವ ಹುದ್ದೆಗೆ ಬಡ್ತಿ ನೀಡಲಾಗಿದೆ. ಅದರಂತೆ ಶ್ರೀ ಆರ್. ಸಿದ್ದರಾಮಯ್ಯ ಅವರು ಸಹ ದಿನಾಂಕ 20–6–2005ರಿಂದ ಸ್ಥಾನಪನ್ನ ಬಡ್ತಿ ಪಡೆದಿದ್ದಾರೆ. ಹಾಗೇನಾದರೂ ಅವರಿಗಿಂತ ಸೇವೆಯಲ್ಲಿ ಕಿರಿಯರಾಗಿದ್ದು, ಸಾಮಾನ್ಯ ವರ್ಗಕ್ಕೆ ಸೇರಿದ ಅಧಿಕಾರಿ ಯಾರಾದರೂ, ಇವರಿಗಿಂತ ಮುಂಚೆ ಬಡ್ತಿ ಹೊಂದಿದ್ದಲ್ಲಿ ಅಂತಹ ಪ್ರಕರಣಗಳನ್ನು ಉಲ್ಲೇಖಿಸಿದಲ್ಲಿ ಆಗ ಮಾತ್ರ ಶ್ರೀ ಸಿದ್ದರಾಮಯ್ಯ ಅವರಿಗೆ ಬಡ್ತಿ ನೀಡಲು ಪರಿಶೀಲಿಸಬಹುದಾಗಿದೆ. ಅಂತಹ ಪ್ರಕರಣಗಳು ಈಗ ಸರ್ಕಾರದ ಗಮನಕ್ಕೆ ಬಂದಿಲ್ಲವಾದ್ದರಿಂದ ಅವರಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡಲು ಅವಕಾಶವಿರುವುದಿಲ್ಲ.

ಈ ಮೇಲ್ಕಾಣಿಸಿದ ಕಾರಣಗಳಿಂದ ದಿನಾಂಕ 13–8–2007ರ ತೀರ್ಪಿನ ರನ್ವಯ ಪರಿಶೀಲಿಸಿದ್ದು, ಅವರು 1996ರಿಂದ ಪೂರ್ವಾನ್ವಯವಾಗಿ ಬಡ್ತಿಗೆ ಅರ್ಹರಾಗುವುದಿಲ್ಲ ಎಂಬ ಅಂಶವನ್ನು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಗಮನಕ್ಕೆ ಸರ್ಕಾರಿ ವಕೀಲರ ಮೂಲಕ ತರಬಹುದೆಂದು ಅಭಿಪ್ರಾಯಪಡಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 467 ಡಿಪಿಐ 2007, ಬೆಂಗಳೂರು, ದಿನಾಂಕ: 29ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಆರ್. ಸಿದ್ದರಾಮಯ್ಯ, ಜಿಲ್ಲಾ ದೈಹಿಕ ಶಿಕ್ಷಣ ಅಧೀಕ್ಷಕರು (ನಿವೃತ್ತ) ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರಿಗೆ ಪೂರ್ವಾನ್ವಯವಾಗಿ ದಿನಾಂಕ 18–7–1996ರಿಂದ ಬಡ್ತಿ ನೀಡುವ ಬಗ್ಗೆ ಕರ್ನಾಟಕ ಆಡಳಿತ ನ್ಯಾಯಧಿಕರಣವು ಅರ್ಜಿ ಸಂಖ್ಯೆ 3670/2007ರಲ್ಲಿ ದಿನಾಂಕ 13–8–2007ರಂದು ನೀಡಿರುವ ತೀರ್ಪಿನನ್ವಯ ಪರಿಶೀಲಿಸಿದ್ದು, ಅವರಿಗಿಂತ ಸೇವೆಯಲ್ಲಿ ಸಾಮಾನ್ಯ ವರ್ಗಕ್ಕೆ ಸೇರಿದ ಅಧಿಕಾರಿಯವರು ಬಡ್ತಿ ಹೊಂದಿದ ಬಗ್ಗೆ ಸ್ಪಷ್ಟನೆ ಇಲ್ಲದಿರುವುದರಿಂದ ಅವರು ಆ ದಿನಾಂಕಕ್ಕೆ ಬಡ್ತಿ ನೀಡಲು ಅವಕಾಶವಿಲ್ಲವೆಂದು ನಿರ್ಣಯಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 230

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಬಿ. ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ ಬೆಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಆದೇಶ.

**ಓದಲಾಗಿದೆ:** ನೋಟೀಸ್ ಕ್ರಮಾಂಕ ಸಿಆಸುಇ 182 ಎಸ್ಇಎನ್ 07, ದಿನಾಂಕ 31–7–2007.

**ಪ್ರಸ್ತಾವನೆ :**

ಶ್ರೀ ಬಿ. ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆ, ಬೆಂಗಳೂರು ಇವರು ಜಂಟೀ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದು ಇವರನ್ನು ಕೊಡಗು ಜಿಲ್ಲಾ ಪಂಚಾಯತ್ ಮಡಿಕೇರಿ, ಇಲ್ಲಿನ ಯೋಜನಾ ನಿರ್ದೇಶಕರಾಗಿ ನೇಮಕ ಮಾಡಲಾಗಿದ್ದು ಸದರಿಯವರು ದಿನಾಂಕ 25–10–2004 ರಿಂದ 18–2–2005 ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು ನಂತರ ದಿನಾಂಕ 19–2–2005 ಮತ್ತು 20–2–2005 ರಂದು ಕರ್ತವ್ಯ ನಿರ್ವಹಿಸಿ ದಿನಾಂಕ 21–2–2005 ರಿಂದ 11–6–2006 ರವರೆಗೆ ಅನಧಿಕೃತ ಗೈರು ಹಾಜರಾಗಿದ್ದು ಇವರು ಸರ್ಕಾರಿ ನೌಕರರಲ್ಲದ ರೀತಿಯಲ್ಲಿ ದುರ್ನಡತೆ ಎಸಗಿರುವುದು ಕಂಡು ಬಂದಿದ್ದುದರಿಂದ ಇವರಿಗೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿ: 31–7–2007ರಲ್ಲಿ ನೋಟೀಸನ್ನು ಜಾರಿ ಮಾಡಲಾಗಿ ಸದರಿ ನೋಟಿಸಿಗೆ ಅಪಾದಿತ ನೌಕರರು ಯಾವುದೇ ಉತ್ತರವನ್ನು ನೀಡದೇ ಇದ್ದುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ವಿಚಾರಣೆಯನ್ನು ನಡೆಸುವುದು ಅತ್ಯಾವಶ್ಯಕವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಕೆಳಗಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 182 ಎಸ್ಇಎನ್ 2007, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ಪ್ರಸನ್ನಯ್ಯ, ನಿವೃತ್ತ ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಇವರ ವಿರುದ್ಧ ಪ್ರಸ್ತಾವನೆಯಲ್ಲಿ ತಿಳಿಸಿರುವ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 235

**ಕೆ.ಜಿ ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

## ಶಿಕ್ಷಣ ಸಚಿವಾಲಯ

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯ ಶ್ರೀ ಹೆಚ್.ವಿ. ಸುಬ್ರಮಣ್ಯ, ಕ್ಷೇತ್ರ ಶಿಕ್ಷಣಾಧಿಕಾರಿ, ಮಾಲೂರು, ಕೋಲಾರ ಜಿಲ್ಲೆ, ಇವರ ಬಡ್ತಿಯನ್ನು ಹಿಂದಕ್ಕೆ ಪಡೆಯುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಇಡಿ 703 ಡಿಪಿಐ 2006, ದಿನಾಂಕ 3–7–2007.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿ1(1)ಶಿ.ಅ.ಸ್ಥಾ. ಬಡ್ತಿ–58/2006–07(ಪಿ) ದಿನಾಂಕ 4–9–2007.
3. ನೋಟೀಸು ದಿನಾಂಕ 8–1–2008.
4. ಸರ್ಕಾರದ ಆದೇಶ ಸಂಖ್ಯೆ: ಇಡಿ 126 ಡಿಜಿಡಿ 2005, ದಿನಾಂಕ 5–10–2006.
5. ಶ್ರೀ ಹೆಚ್.ವಿ. ಸುಬ್ರಮಣ್ಯ, ಕ್ಷೇತ್ರ ಶಿಕ್ಷಣಾಧಿಕಾರಿ, ಮಾಲೂರು ಕೋಲಾರ ಜಿಲ್ಲೆ, ಇವರ ಹೇಳಿಕೆ ದಿನಾಂಕ 22–1–2008.

**ಪ್ರಸ್ತಾವನೆ :**

ಶ್ರೀ ಹೆಚ್.ವಿ. ಸುಬ್ರಮಣ್ಯ, ಇವರು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ–32 ರಡಿ ಸ್ವತಂತ್ರ ಪ್ರಭಾರದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಾಲೂರು, ಕೋಲಾರ ಜಿಲ್ಲೆಯಾಗಿ ನೇಮಕಗೊಂಡು ಕೆಲಸ ಮಾಡುತ್ತಿದ್ದರು. ಬಡ್ತಿ ಹುದ್ದೆಗಳು ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ ಲಭ್ಯವಾದಾಗ ಇವರನ್ನು ಒಳಗೊಂಡಂತೆ ಇತರೆ ಅಧಿಕಾರಿಗಳನ್ನು ಸ್ಥಾನಪನ್ನ ಆಧಾರದ ಮೇಲೆ ಬಡ್ತಿ ನೀಡಲು ಪರಿಗಣಿಸಲಾಯಿತು. ಹೀಗೆ ಬಡ್ತಿಗೆ ಪರಿಗಣಿಸುವಾಗ ಇವರು ವಿರುದ್ಧ ಬಾಕಿ ಇದ್ದ ಇಲಾಖಾ ವಿಚಾರಣೆ ಸಮಿತಿಯ ಗಮನಕ್ಕೆ ಕಣ್ತಪಿನಿಂದ ಬಂದಿರುವುದಿಲ್ಲ. ಹಾಗಾಗಿ ಇವರನ್ನು ಸ್ಥಾನಪನ್ನ ಬಡ್ತಿಗೆ ಪರಿಗಣಿಸಿ ದಿನಾಂಕ 3–7–2007ರ ಅಧಿಸೂಚನೆಯಲ್ಲಿ ಬಡ್ತಿ ನೀಡಲಾಗಿದೆ. ತದನಂತರ ಇವರ ಇಲಾಖಾ ವಿಚಾರಣೆ ಬಗ್ಗೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ಸರ್ಕಾರದ ಗಮನಕ್ಕೆ ತಂದು ಸ್ಥಾನಪನ್ನ ಬಡ್ತಿಯನ್ನು ರದ್ದುಗೊಳಿಸಲು ಕೋರಿದ್ದರು. ಅದನ್ನು ಅನುಸರಿಸಿ, ಇಲಾಖಾ ವಿಚಾರಣೆಗಳು ಬಾಕಿ ಇದ್ದ ಪ್ರಯುಕ್ತ ಸದರಿಯವರಿಗೆ ದಿನಾಂಕ 8–1–2008ರಂದು ನೋಟೀಸು ಜಾರಿ ಮಾಡಲಾಗಿತ್ತು. ಶ್ರೀ ಹೆಚ್.ವಿ. ಸುಬ್ರಮಣ್ಯ, ಇವರು ದಿನಾಂಕ 22–1–2008ರಂದು ಸದರಿ ನೋಟೀಸಿಗೆ ಸಮಜಾಯಿಷಿ ನೀಡಿ, ಇಲಾಖಾ ವಿಚಾರಣೆಯ್ಲಲಿ ಭವಿಷ್ಯದಲ್ಲಿ ದೋಷಮುಕ್ತರಾಗಬಹುದೆಂದು ತಿಳಿಸಿ, ಸ್ಥಾನಪನ್ನ ಬಡ್ತಿಯನ್ನು ಮುಂದುವರೆಸಲು ಕೋರಿರುತ್ತಾರೆ.

ಶ್ರೀ ಹೆಚ್.ವಿ. ಸುಬ್ರಮಣ್ಯರವರು ದಿನಾಂಕ 22–1–2008ರ ತಮ್ಮ ಸಮಜಾಯಿಷಿಯಲ್ಲಿ ವಿವರಣೆ ನೀಡಿ, ತಮ್ಮ ವಿರುದ್ಧ ಇಲಾಖಾ ವಿಚಾರಣೆ ಇದ್ದುದನ್ನು ಒಪ್ಪಿಕೊಂಡಿರುತ್ತಾರೆ. ಇನ್ನೂ ಇಲಾಖಾ ವಿಚಾರಣೆ ಅಂತಿಮವಾಗಿ

ತೀರ್ಮಾನವಾಗಿರುವುದಿಲ್ಲ. ಹಾಗಾಗಿ, ಅವರು ಬಡ್ತಿಗೆ ಅರ್ಹರಾಗುವುದಿಲ್ಲವೆಂದು ಸರ್ಕಾರವು ಮನಗಂಡಿದೆ. ಆದ್ದರಿಂದ ಕಣ್ತಪಿನಿಂದ ಬಡ್ತಿ ನೀಡಿರುವ ಆದೇಶವನ್ನು ವಾಪಸ್ಸು ಪಡೆಯಲು ನಿರ್ಧಾರವಾಗಿದ್ದು, ಈ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿತು. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 703 ಡಿಪಿಐ 2006, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ, ಸಾರ್ವಜನಿಕ ಶಿಕ್ಷಣ ಇಲಾಖೆಯ, ಕ್ಷೇತ್ರ ಶಿಕ್ಷಣಾಧಿಕಾರಿ ವೃಂದದ ಶ್ರೀ ಹೆಚ್.ವಿ. ಸುಬ್ರಮಣ್ಯ, ಇವರಿಗೆ ಅಧಿಸೂಚನೆ ಸಂಖ್ಯೆ: ಇಡಿ 703 ಡಿಪಿಐ 2006, ದಿನಾಂಕ 3-7-2007ರಲ್ಲಿ ನಿಯಮ-32ರಡಿಯ ಸ್ವತಂತ್ರ ಪ್ರಭಾರದಿಂದ ಸ್ಥಾನಪನ್ನ ಬಡ್ತಿ ನೀಡಿ ಆದೇಶಿಸಿರುವುದನ್ನು ರದ್ದುಪಡಿಸಿ, ಅವರಿಗೆ ನೀಡಿದ್ದ ಬಡ್ತಿ ಆದೇಶವನ್ನು ವಾಪಸ್ಸು ಪಡೆಯಲಾಗಿದೆ. ಹಾಗಿದ್ದರೂ ಕೂಡ ಇವರು ನಿಯಮ-32ರಡಿ ಸ್ವತಂತ್ರ ಪ್ರಭಾರದ ಮೇಲೆ ಇರುವ ಆದೇಶವನ್ನು ಪುನರ್ ಸ್ಥಾಪಿಸಿ, ಇವರನ್ನು ಕ್ಷೇತ್ರ ಶಿಕ್ಷಣಾಧಿಕಾರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಮಾಲೂರು, ಕೋಲಾರ ಜಿಲ್ಲೆ, ಇಲ್ಲಿಯೇ ಮುಂದುವರೆಸಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 348

**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

**ಸಹಕಾರ ಸಚಿವಾಲಯ**

**ವಿಷಯ :** ಸಹಕಾರ ನೂಲಿನ ಗಿರಣಿಗಳಿಗೆ –ರಾಜ್ಯ ಮಟ್ಟದ ಸಲಹಾ ಸಮಿತಿ ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 15-5-1995ರ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 45 ಸಿಐಎಂ 1994.
2. ದಿನಾಂಕ 24-11-2000ರ ಸರ್ಕಾರದ ಆದೇಶ ಸಂಖ್ಯೆ: ಸಿಎಂಡಬ್ಲ್ಯೂ 24 ಸಿಐಎಂ 99.
3. ದಿನಾಂಕ 12-3-2008ರ ಸಇ 28 ಸಿಐಎಂ 2006ರ ಸರ್ಕಾರದ ಪತ್ರ.
4. ದಿನಾಂಕ 20-3-2008ರ ಸಂಖ್ಯೆಯ ಕೈಜಇ/ಜಂ.ರಿ/ಜತ/ಕ.ಸ.ಉ.ನೂ.ಗಿ./ 2003-04 ಸಹಕಾರ ಸಂಘಗಳ ಜಂಟಿ ರಿಜಿಸ್ಟಾರ್(ಜವಳಿ), ಜವಳಿ ಅಭಿವೃದ್ಧಿ ಆಯುಕ್ತರ ಕಛೇರಿ ಇವರ ಪತ್ರ.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1) ದಿನಾಂಕ 15-5-1995ರ ಸರ್ಕಾರಿ ಆದೇಶದಲ್ಲಿ ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಯಂತ್ರೋಪಕರಣಗಳನ್ನು ಖರೀದಿಸುವ ಸಲುವಾಗಿ ಸಲಹೆ/ಸೂಚನೆಗಳನ್ನು ನೀಡಲು ಸರ್ಕಾರದ ಕಾರ್ಯದರ್ಶಿ, ಸಹಕಾರ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಮೇಲೆ ಓದಲಾದ ಉಲ್ಲೇಖ (2) ದಿನಾಂಕ 24-11-2000ರ ಸರ್ಕಾರಿ ಆದೇಶದ ಮೂಲಕ ಈ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಮತ್ತೇ ಪುನರ್ ರಚಿಸಲಾಗಿತ್ತು.

ಈಗ ಈ ಸಹಕಾರ ನೂಲಿನ ಗಿರಣಿಗಳಿಗೆ ಇರುವ ರಾಜ್ಯ ಮಟ್ಟದ ಸಲಹಾ ಸಮಿತಿಯನು ಜವಳಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಇವರ ಅಧ್ಯಕ್ಷತೆಯಲ್ಲಿ ಪುನರ್ ರಚಿಸಲು ಉದ್ದೇಶಿಸಲಾಗಿದೆ. ಆ ಪ್ರಕಾರ ಜವಳಿ ಅಭಿವೃದ್ಧಿ ಆಯುಕ್ತರಿಗೆ ದಿನಾಂಕ 12-3-2008ರಂದು (ಉಲ್ಲೇಖ 3) ಪತ್ರ ಬರೆದು ಸದರಿ ಸಮಿತಿ ಸಭೆಯನ್ನು ಅವರ ಅಧ್ಯಕ್ಷತೆಯಲ್ಲಿಯೇ ನಡೆಸಬಹುದೆಂದು ತಿಳಿಸಲಾಗಿತ್ತು. ಸರ್ಕಾರದ ಈ ಪತ್ರವನ್ನು ಅನುಸರಿಸಿ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ), ಜವಳಿ ಅಭಿವೃದ್ಧಿ ಆಯುಕ್ತರ ಕಚೇರಿ, ಬೆಂಗಳೂರು ಇವರು ಮೇಲೆ ಓದಲಾದ ಉಲ್ಲೇಖ (4)ರಲ್ಲಿನ ಪತ್ರದಲ್ಲಿ ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿರವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಪುನರ್ ರಚಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

ಈ ಪ್ರಸ್ತಾವೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 06 ಸಿಐಎಂ 2008, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಈ ಹಿಂದೆ ಹೊರಡಿಸಲಾಗಿದ್ದ ದಿನಾಂಕ 24-11-2000ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ, ಸಹಕಾರಿ ನೂಲಿನ ಗಿರಣಿಗಳಿಗೆ ಬೇಕಾದ ಕಟ್ಟಡ ಕಾಮಗಾರಿಗಳು, ಯಂತ್ರೋಪಕರಣಗಳ ಖರೀದಿ, ಇತ್ಯಾದಿಗಳ ಬಗ್ಗೆ ಸಲಹೆ/ಸೂಚನೆಗಳನ್ನು ನೀಡಲು ರಾಜ್ಯ ಮಟ್ಟದ ಸಲಹಾ ಸಮಿತಿಯನ್ನು ಕೆಳಕಂಡಂತೆ ಪುನರ್ ರಚಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ:

| | | |
|---|---|---|
| 1 | ಜವಳಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು. | ಅಧ್ಯಕ್ಷರು |
| 2 | ಪ್ರಾಂತೀಯ ನಿರ್ದೇಶಕರು, ಎಸ್.ಸಿ.ಡಿ.ಸಿ. ಬೆಂಗಳೂರು | ಸದಸ್ಯರು |

| | | |
|---|---|---|
| 3 | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಸಹಕಾರಿ ನೂಲಿನ ಗಿರಣಿಗಳ ಮಹಾಮಂಡಳ ನಿ., ಬೆಂಗಳೂರು | ಸದಸ್ಯರು |
| 4 | ಸಂಬಂಧಪಟ್ಟ ಸಹಕಾರಿ ನೂಲಿನ ಗಿರಣಿಗಳ ಅಧ್ಯಕ್ಷರು | ಸದಸ್ಯರು |
| 5 | ಸಂಬಂಧಪಟ್ಟ ಸಹಕಾರಿ ನೂಲಿನ ಗಿರಣಿಗಳ ವ್ಯವಸ್ಥಾಪಕ ನಿರ್ದೇಶಕರು | ಸದಸ್ಯರು |
| 6 | ಜಂಟಿ ನಿರ್ದೇಶಕರು, ಕೈಮಗ್ಗ ಮತ್ತು ಜವಳಿ, ಜವಳಿ ಅಭಿವೃದ್ಧಿ ಆಯುಕ್ತರ ಕಚೇರಿ, ಬೆಂಗಳೂರು | ಸದಸ್ಯರು |
| 7 | ಲೋಕೋಪಯೋಗಿ ಇಲಾಖೆಯ ಸಿ ಅಂಡ್ ಬಿ ವಿಭಾಗದ ಕಾರ್ಯಪಾಲಕ ಅಭಿಯಂತರರು, ಬೆಂಗಳೂರು | ಸದಸ್ಯರು |
| 8 | ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ಜವಳಿ ಅಭಿವೃದ್ಧಿ ಆಯುಕ್ತರ ಕಚೇರಿ | ಸದಸ್ಯ ಕಾರ್ಯದರ್ಶಿ |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 623

**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಸಮಾಜ ಕಲ್ಯಾಣ ಇಲಾಖೆಯಿಂದ ಮಾನ್ಯತೆ ಪಡೆದು ಖಾಸಗಿ ಶಿಕ್ಷಣ ಸಂಸ್ಥೆಗಳಿಂದ ನಡೆಸುತ್ತಿರುವ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯದ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳಿಗೆ ಭೋಜನ ವೆಚ್ಚ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಕನಿ: ಇಡಿ3: ಸಿಆರ್2: 2005–06, ದಿ: 3–1–2007 ಮತ್ತು ದಿ: 27–7–2007.
2. ನಿರ್ದೇಶಕರು, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂ: ಪವಕನಿ: ಇಡಿ(2):ಸಿಆರ್ 52: 2006–07, ದಿ: 22–1–2007 ಮತ್ತು ದಿ: 11–1–2008.
3. ನಿರ್ದೇಶಕರು, ಅಲ್ಪಸಂಖ್ಯಾತರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಅಸಂನಿ:ವಿನಿ:ಸಿಆರ್–21: 2007–08, ದಿ: 31–7–2007.
4. ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಹಿಂವನಿ: ವನಿಶಾ–1: ಸಿಆರ್ 33: 2004–05, ದಿ: 21–1–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಸಮಾಜ ಕಲ್ಯಾಣ ಇಲಾಖೆಯಿಂದ ಮಾನ್ಯತೆ ಪಡೆದು ಖಾಸಗಿ ಶಿಕ್ಷಣ ಸಂಸ್ಥೆಗಳಿಂದ ನಡೆಸುತ್ತಿರುವ ಅನುದಾನಿತ ಮೆಟ್ರಿಕ್ ಪೂರ್ವ ಹಾಗೂ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ನಿಲಯಾರ್ಥಿಗಳಿಗೆ ಮಾಹೆಯಾನ ಭೋಜನ ವೆಚ್ಚವನ್ನು ಹೆಚ್ಚಿಸುವಂತೆ ದಿ: 30–7–2005ರಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿತ್ತು. ಆದರೆ ಸರ್ಕಾರದ ಆದೇಶ ಸಂಖ್ಯೆ: ಸಕಇ 231 ಪಕವಿ 2005, ದಿ: 5–12–2005ರಲ್ಲಿ ಸರ್ಕಾರಿ ಮೆಟ್ರಿಕ್ ಪೂರ್ವ/ ಮೆಟ್ರಿಕ್ ನಂತರದ ವಿದ್ಯಾರ್ಥಿಗಳ ಮಾಹೆಯಾನ ಭೋಜನಾ ವೆಚ್ಚವನ್ನು ಈ ಕೆಳಕಂಡಂತೆ ಹೆಚ್ಚಿಸಿ ಆದೇಶಿಸಲಾಗಿದೆ.

1. ಸರ್ಕಾರಿ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ಭೋಜನಾ ವೆಚ್ಚ ರೂ. 400/– ರಿಂದ ರೂ. 450/–.
2. ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಪ್ರತಿ ವಿದ್ಯಾರ್ಥಿಗೆ ಮಾಹೆಯಾನ ಭೋಜನಾ ವೆಚ್ಚ ರೂ. 450/– ರಿಂದ ರೂ. 500/–.

ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಲ್ಲಿನ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳಿಗೆ ಮಾಹೆಯಾನ ಭೋಜನ ವೆಚ್ಚದ ದರವನ್ನು ಪರಿಷ್ಕರಿಸುವ ಬಗ್ಗೆ ದಿ: 10–11–2006ರಂದು ನಡೆದ ಪರಿಶಿಷ್ಟ ಜಾತಿ/ಪರಿಶಿಷ್ಟ ವರ್ಗಗಳ ಕಲ್ಯಾಣ ಸಮಿತಿ ಸಭೆಯ ಸಲಹೆಯನ್ವಯ ದಿ: 18–11–2006ರಂದು ನಡೆದ ಅಧಿಕಾರಯುಕ್ತ ಸಮಿತಿ ಸಭೆಗೆ ಟಿಪ್ಪಣಿಯನ್ನು ಸಲ್ಲಿಸಲಾಗಿರುವುದಾಗಿ ವರದಿ ಮಾಡಿರುತ್ತಾರೆ.

ಪ್ರಸ್ತುತ ಅನುದಾನಿತ ಮೆಟ್ರಿಕ್ ಪೂರ್ವ / ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಮಾಹೆಯಾನ ಭೋಜನಾ ವೆಚ್ಚವು ಸರ್ಕಾರಿ ವಿದ್ಯಾರ್ಥಿನಿಲಯಗಳ ನಿಲಯಾರ್ಥಿಗಳಿಗೆ ನೀಡುತ್ತಿರುವ ಭೋಜನಾ ವೆಚ್ಚಕ್ಕೆ ಹೋಲಿಸಿದ್ದಲ್ಲಿ ಕಡಿಮೆ ಇದ್ದು, ಇದನ್ನು ಸರ್ಕಾರಿ ವಿದ್ಯಾರ್ಥಿನಿಲಯಗಳ ದರಗಳಂತೆ ಪರಿಷ್ಕರಿಸುವಂತೆ ಜಿಲ್ಲೆಗಳು/ ತಾಲ್ಲೂಕುಗಳಲ್ಲಿನ

ಅನುದಾನಿತ ವಿದ್ಯಾರ್ಥಿನಿಲಯಗಳ ಆಡಳಿತ ವರ್ಗದವರು ಮೇಲಿಂದ ಮೇಲೆ ಮನವಿಗಳನ್ನು ಸಲ್ಲಿಸಿರುತ್ತಾರೆ. ಇವರುಗಳ ಬೇಡಿಕೆಯನ್ವಯ ಮಾನವೀಯತೆ ದೃಷ್ಠಿಯಿಂದ ಪ್ರಸ್ತುತ ಅನುದಾನಿತ ವಿದ್ಯಾರ್ಥಿನಿಲಯಗಳಲ್ಲಿನ ಮೆಟ್ರಿಕ್ ಪೂರ್ವ/ಮೆಟ್ರಿಕ್ ನಂತರದ ವಿದ್ಯಾರ್ಥಿಗಳಿಗೆ ನೀಡುತ್ತಿರುವ ಮಾಹೆಯಾನ ಭೋಜನಾ ವೆಚ್ಚವನ್ನು ಈ ಕೆಳಗೆ ನಮೂದಿಸಿರುವಂತೆ ಪರಿಷ್ಕರಿಸಿ ಆದೇಶಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

| ಕ್ರ ಸಂ | ವಿಷಯ | ಹಾಲಿ ನೀಡುತ್ತಿರುವ ಭೋಜನಾ ವೆಚ್ಚ | ಪರಿಷ್ಕರಿಸಬೇಕಾದ ಭೋಜನಾ ವೆಚ್ಚ |
|---|---|---|---|
| 1 | ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ಪ್ರತಿ ವಿದ್ಯಾರ್ಥಿಗೆ | ರೂ. 350/– | ರೂ. 450/– |
| 2 | ಅನುದಾನಿತ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ಪ್ರತಿ ವಿದ್ಯಾರ್ಥಿಗೆ | ರೂ. 400/– | ರೂ. 500/– |

2006–07ನೇ ಸಾಲಿಗೆ ರಾಜ್ಯವಲಯದಡಿ ಪರಿಶಿಷ್ಟ ಜಾತಿ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿ ಕಾರ್ಯಕ್ರಮಗಳಿಗೆ ಅನುಮೋದನೆ ನೀಡುವ ಬಗ್ಗೆ ದಿ: 9–3–2007ರಂದು ಅಪರ ಮುಖ್ಯ ಕಾರ್ಯದರ್ಶಿಗಳು ಹಾಗೂ ಅಭಿವೃದ್ಧಿ ಆಯುಕ್ತರು ಇವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಸಮಾಜ ಕಲ್ಯಾಣ ಇಲಾಖೆಯಿಂದ ಮಾನ್ಯತೆ ಪಡೆದು ಖಾಸಗಿ ಸಂಸ್ಥೆಗಳಿಂದ ನಡೆಸಲ್ಪಡುತ್ತಿರುವ ಅನುದಾನಿತ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳಿಗೆ ಮಾಹೆಯಾನ ಬೋಜನಾ ವೆಚ್ಚವನ್ನು ಹೆಚ್ಚಿಸುವ ಬಗ್ಗೆ ಸಮಿತಿಯು ಧೀರ್ಘವಾಗಿ ಚರ್ಚಿಸಿ, ಕಡತದಲ್ಲಿ ಆರ್ಥಿಕ ಇಲಾಖೆಯು ಸಹಮತಿ ಪಡೆದು ಪ್ರತಿ ತಿಂಗಳಿಗೆ ಭೋಜನಾ ವೆಚ್ಚವನ್ನು ಕ್ರಮವಾಗಿ ರೂ. 350/– ರಿಂದ ರೂ. 450/– ಮತ್ತು ರೂ. 400/– ರಿಂದ 500/–ಕ್ಕೆ ಹೆಚ್ಚಿಸಲು ಸಮಿತಿ ಒಪ್ಪಿರುತ್ತದೆ.

ಆಯುಕ್ತರು, ಸಮಾಜ ಕಲ್ಯಾಣ ಇಲಾಖೆ, ಬೆಂಗಳೂರು ಇವರು ಪತ್ರ ದಿ: 27–7–2007ರಲ್ಲಿ ರಾಜ್ಯದಲ್ಲಿ ಒಟ್ಟಾರೆ 245 ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು ಇದ್ದು ಅವುಗಳಿಗೆ 13,999 ವಿದ್ಯಾರ್ಥಿಗಳ ಸಂಖ್ಯಾಬಲ ಮತ್ತು ಅನುದಾನಿತ ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಒಟ್ಟಾರೆ 90 ಇದ್ದು ಅವುಗಳಿಗೆ 7,360 ವಿದ್ಯಾರ್ಥಿಗಳ ಸಂಖ್ಯಾಬಲ ಮಂಜೂರಾಗಿದೆ ಎಂದು ವರದಿ ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯು ಸದರಿ ಇಲಾಖಾವತಿಯಿಂದ 30 ಖಾಸಗಿ ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಿದ್ದು ಅವುಗಳಿಗೆ 1474 ವಿದ್ಯಾರ್ಥಿಗಳ ಸಂಖ್ಯಾಬಲ ಮಂಜೂರಾಗಿದೆ ಮತ್ತು 05 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಕಾರ್ಯನಿರ್ವಹಿಸುತ್ತಿದ್ದು ಅವುಗಳಲ್ಲಿ 250 ವಿದ್ಯಾರ್ಥಿಗಳಿಗೆ ಪ್ರಸ್ತುತ ವಸತಿ ಸೌಲಭ್ಯ ಒದಗಿಸಿರುವುದಾಗಿ ವರದಿ ಮಾಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಅಲ್ಪಸಂಖ್ಯಾತರ ಇಲಾಖೆಯು, ಸದರಿ ಇಲಾಖೆಯಿಂದ 61 ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳಿದ್ದು ಅವುಗಳಿಗೆ 3400 ವಿದ್ಯಾರ್ಥಿಗಳ ಸಂಖ್ಯಾಬಲ ಮಂಜೂರಾಗಿರುತ್ತವೆ ಎಂದು ವರದಿ ಮಾಡಿರುತ್ತದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯು ಸದರಿ ಇಲಾಖೆವತಿಯಿಂದ 228 ಖಾಸಗಿ ಮೆಟ್ರಿಕ್ ಪೂರ್ವ ಅನುದಾನಿತ ವಿದ್ಯಾರ್ಥಿನಿಲಯಗಳು ಇದ್ದು ಅವುಗಳಿಗೆ 12058 ವಿದ್ಯಾರ್ಥಿಗಳ ಸಂಖ್ಯಾಬಲ ಮಂಜೂರಾಗಿರುತ್ತವೆ ಮತ್ತು 15 ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು ಇದ್ದು ಅವುಗಳಿಗೆ 459 ವಿದ್ಯಾರ್ಥಿಗಳ ಸಂಖ್ಯಾಬಲ ಮಂಜೂರಾಗಿರುತ್ತವೆ ಎಂದು ವರದಿ ಮಾಡಿರುತ್ತದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 251 ಪಕವಿ 2005, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲಿ ಸಮಾಜ ಕಲ್ಯಾಣ ಇಲಾಖೆ, ಹಿಂದುಳಿದ ವರ್ಗಗಳ ಇಲಾಖೆ, ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆ ಮತ್ತು ಅಲ್ಪಸಂಖ್ಯಾತರ ಇಲಾಖೆಗಳ ಕಾರ್ಯ ವ್ಯಾಪ್ತಿಯಲ್ಲಿ ಮಾನ್ಯತೆ ಪಡೆದು ನಡೆಯುತ್ತಿರುವ ಅನುದಾನಿತ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿಗಳ ಭೋಜನಾ ವೆಚ್ಚವನ್ನು ದಿ: 1–4–2008ರಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಹೆಚ್ಚಿಸಿ ಆದೇಶಿಸಲಾಗಿದೆ.

1. ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿಗಳಿಗೆ ಮಾಹೆಯಾನ ಭೋಜನಾ ವೆಚ್ಚ ರೂ 350/– ರಿಂದ ರೂ. 450/– (ರೂಪಾಯಿ ನಾಲ್ಕು ನೂರ ಐವತ್ತು ಮಾತ್ರ) ಕ್ಕೆ.
2. ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳ ವಿದ್ಯಾರ್ಥಿಗಳಿಗೆ ಮಾಹೆಯಾನ ಭೋಜನಾ ವೆಚ್ಚ ರೂ. 450/– ರಿಂದ ರೂ. 500/– (ರೂಪಾಯಿ ಐದನೂರು ಮಾತ್ರ) ಕ್ಕೆ.

ಸದರಿ ಅನುದಾನಿತ ವಿದ್ಯಾರ್ಥಿನಿಲಯಗಳು ಸುಸ್ಥಿತಿಯಲ್ಲಿ ನಡೆಯುತ್ತಿರುವ ಬಗ್ಗೆ ಪುನರಾವಲೋಕಿಸಿ ಸುಸ್ಥಿತಿಯಲ್ಲಿ ಕಾರ್ಯನಿರ್ವಹಿಸದೇ ಇರುವ ಅನುದಾನಿತ ಹಾಸ್ಟೆಲ್‌ಗಳನ್ನು ಅನುದಾನದ ವ್ಯಾಪ್ತಿಯಿಂದ ಕೈಬಿಡುವ ಬಗ್ಗೆ ಸರ್ಕಾರಕ್ಕೆ ವಿವರವಾದ ವರದಿ ಸಲ್ಲಿಸುವಂತೆ ಇಲಾಖಾ ಮುಖ್ಯಸ್ಥರಿಗೆ ಸೂಚಿಸಲಾಗಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 36 ವೆಚ್ಚ–3/2008, ದಿ: 26–2–2008ರಲ್ಲಿನ ಸಮಹತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 625

**ಎ.ಎಂ. ಚಿದಾನಂದಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಮಾಜ ಕಲ್ಯಾಣ ಇಲಾಖೆ

**FINANCE SECRETARIAT**

**Sub :** Absterlty Measures in Government Expenditure.

**Read :** 1. Government Order No. FD 2 BEM 1998, dated 5-11-1998.

2. Corrigendum No. FD 4 BEM 2007, dated 10-9-2007.

**Preamble:**

In the Government Order No. FD 2 BEM 1998 dated 5-11-1998 read with Corrigendum at (2) above, guidelines have been issued for entitilement of telephones to different categories of officers, Still, some Departments are sending proposals to Finance Department for sanction of teelphones, Finance Department has felt the need for clarification in this regard. Hence this order.

**Government Order No. FD 2 BEM 2008, Bangalore, Dated 3rd April 2008**

Secretaries to Government / Heads of Departments are empowered to sanction telephones to the officers who are entitled for telephones as per Government Order No. FD 2 BEM 1998 dated 5-11-1998 read with Corrigendum No. FD 4 BEM 2007, dated 10-9-2007. Where there is ambiguity or sanction beyond entitlement/ releaxation of prescribed scale etc is required, only such cases may be referred to Finance Department.

By order and in the name of the President of India,

PR. 624

**C. SHAMA RAO**

Under Secretary to Government,

Finance Department. (F.R. & B.C.C.)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಜಂಟಿ ಇಲಾಖಾ ವಿಚಾರಣೆ (1) ಡಾ॥ ಎಂ.ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ (2) ಎಸ್.ಎಂ. ಪೂಜಾರಿ, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರುಗಳ ವಿರುದ್ಧ ವಿಚಾರಣೆಯನ್ನು ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಸಂಖ್ಯೆ: Compt/Lok/MYS-37/2002-03/ARE-5, ದಿನಾಂಕ 14–6–2007.

**ಪ್ರಸ್ತಾವನೆ :**

ಅಡಿಷನಲ್ ರಿಜಿಸ್ಟ್ರಾರ್, ವಿಚಾರಣೆಗಳು–5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ 14–6–2007ರ ಪತ್ರದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ಈ ಕೆಳಕಂಡ ಅಧಿಕಾರಿ ಹಾಗೂ ನೌಕರರು ಕೊಡಗಿನ ರಾಜರ ಗದ್ದುಗೆಗಳ ಸಂರಕ್ಷಣಾ ಕಾರ್ಯವನ್ನು ಕೈಗೊಳ್ಳುವಾಗ ಅಕ್ರಮಗಳನ್ನು ನಡೆಸಿ ಲೋಕೋಪಯೋಗಿ ಸಂಹಿತೆಯನ್ನು ಉಲ್ಲಂಘಿಸಿ ರೂ. 1,09,398/–ಗಳನ್ನು ಸರ್ಕಾರಕ್ಕೆ ನಷ್ಟ ಉಂಟು ಮಾಡಿದ್ದು ಇದಕ್ಕಾಗಿ ಮೇಲ್ಕಂಡ ಅಧಿಕಾರಿ/ ನೌಕರರ ವಿರುದ್ಧ ಪೂರ್ಣ ಪ್ರಮಾಣದ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವಂತೆ ಕೋರಿದ್ದಾರೆ. ತನಿಖಾ ವರದಿಯನ್ನು ಪರಿಶೀಲಿಸಲಾಗಿ 3ನೇ ಆರೋಪಿ ಜಿ.ಎ. ಪಾರ್ಶ್ವನಾಥ್, ಪ್ರಾಚ್ಯವಸ್ತು ಸಂರಕ್ಷಣಾ ಸಹಾಯಕ ಹಾಗೂ ನಾಲ್ಕನೇ ಆರೋಪಿ ಕೆ.ಎಲ್. ಶಿವಲಿಂಗಯ್ಯ, ಲೆಕ್ಕಾಧಿಕ್ಷಕರು ಇವರುಗಳು ವಯೋನಿವೃತ್ತಿ ಹೊಂದಿದ್ದು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಇದ್ದ ನಾಲ್ಕು ವರ್ಷಗಳ ಗಡುವು ಮುಗಿದಿರುವುದರಿಂದ ಅವರ ವಿರುದ್ಧ ವಿಚಾರಣೆ ಹೂಡಲು ಅವಕಾಶವಿರುವುದಿಲ್ಲ. ಆದ್ದರಿಂದ ಎಂ.ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು ಹಾಗೂ ಎಂ.ಎಂ. ಪೂಜಾರಿ, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರು ಅವರುಗಳ ವಿರುದ್ಧ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ:

**ಆದೇಶ ಸಂಖ್ಯೆ: ಸಂಕಇ 81 ಕೆಎಂಯು 2002, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್ 2008.**

ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳೂ, 1957ರ ನಿಯಮ 14(3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಡಾ॥ ಎಂ.ವಿ. ಕೃಷ್ಣಪ್ಪ, ಹಿಂದಿನ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ (ಪ್ರಸ್ತುತ ಪ್ರಾಧ್ಯಾಪಕರು, ಸ್ನಾತಕೋತ್ತರ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು) ಹಾಗೂ ಎಸ್.ಎಂ. ಪೂಜಾರಿ, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರುಗಳ ವಿರುದ್ಧ ಮೇಲ್ಕಂಡ ಆರೋಪ ಕುರಿತು ಇಲಾಖಾ ವಿಚಾರಣೆ ಹಾಗೂ ವರದಿಗಾಗಿ ಪ್ರಕರಣವನ್ನು ಸನ್ಮಾನ್ಯ ಲೋಕಾಯುಕ್ತರಿಗೆ ಈ ಮೂಲಕ ವಹಿಸುತ್ತದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 626

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## HORTICULTURE SECRETARIAT

**Sub :** Release of Rs. 372.00 lakhs to College of Horticulture, Bidar.

**Read :** 1. G.O. No. ಕೃತೋಇ 82 ತೋಯೋಕಾ 2007 (ಭಾ–1) ದಿನಾಂಕ 1–8–2007.

2. G.O. No. ಕೃತೋಇ 521 ತೋಇವಿ 2007, ದಿನಾಂಕ 14–2–2008.

**Preamble:**

Consequent to the announcement made in the Budget Speech 2007-08, Horticulture College, Bidar has been started from the year 2007-08 under the University of Agricultural Sciences (UAS), Dharwad as per GO read at (1) above and 25 students have been admitted for B.Sc (Horticulture) programme.

2. Rs. 400.00 lakhs have been provided under the Head of Account 4401-00-800-3-00 for Horticulture College, Bidar. Out of which, Rs. 28.00 lakhs were released to UAS, Dharwad for the purchase of a bus for movement of students and a vehicle for the movement of scientists and staff as per GO read at (2) above. Now that, it has been decided to release Rs. 3.72 crores.

3. Hence, this order.

**Government Order No. AHD 82 HPP 2007, Bangalore, Dated 29th March 2008**

Government is pleased to release Rs. 3.72 crores (Rupees Three Crores and Seventy Two Lakhs only) under the Head of Account 4401-00-800-3-00 (Plan) during the year 2007-08 to University of Agricultural Sciences, Dharwad for the expenses towards Bidar Horticulture College.

2. The amount will be drawn by the concerned through Grant-in-Aid Bill and the Director of Horticulture is permitted to counter sign.

3. The Director of Horticulture shall arrange from University of Agricultural Sciences, Dharwad to prepare a Detailed Project Report with the staff requirement for the Bidar Horticulture College and submit the same to the Government soon.

4. This Order issues with concurrence with the Finance Department vide Note No. ಆಇ 534 ವೆಚ್ಚ–4/07, dated 29-3-2008.

By order and in the name of the President of India,

PR. 577

**S. RAJU**

Under Secretary to Government,

Horticulture Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಎರಡು ಜಂಟಿ ಕಾರ್ಯದರ್ಶಿ ಹುದ್ದೆಗಳಲ್ಲಿ ಒಂದು ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 141 ಸಅಸೇ 2004, ದಿನಾಂಕ: 5–3–2005.

2. ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರ ಟಿಪ್ಪಣಿ ಸಂಖ್ಯೆ ಸಂವ್ಯಶಾಇ 2925 ಕಾ: 2007, ದಿನಾಂಕ 28–7–2007 ಮತ್ತು ಅರೆ ಸರ್ಕಾರಿ ಪತ್ರ ದಿನಾಂಕ 16–10–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 5–3–2005ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿದ್ದ ಮೂರು ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗಳ ಪೈಕಿ ಎರಡು ಹುದ್ದೆಗಳನ್ನು ಜಂಟಿ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿಗಳೆಂದು ನಿಮ್ನೀಕರಿಸಲಾಗಿದೆ. ಇದರಿಂದಾಗಿ ಸದರಿ ಇಲಾಖೆಯಲ್ಲಿ ಒಂದು ಅಪರ ಕಾರ್ಯದರ್ಶಿ ಹುದ್ದೆಯು ಮಾತ್ರ ಅಸ್ತಿತ್ವದಲ್ಲಿರುತ್ತದೆ.

ಮೇಲೆ (2)ರ ಓದಲಾಗಿರುವ ದಿನಾಂಕ 28–7–2007ರ ಟಿಪ್ಪಣಿ ಮತ್ತು 16–10–2007ರ ಅರೆ ಸರ್ಕಾರಿ ಪತ್ರದಲ್ಲಿ ಇಲಾಖೆಯ ಆಡಳಿತಾತ್ಮಕ ಹಿತದೃಷ್ಟಿಯಿಂದ ಹಾಗೂ ವಿಧಾನ ಮಂಡಲದ ಉಭಯ ಸದನಗಳ ಕಾರ್ಯಕಲಾಪಗಳನ್ನು ಸಮನ್ವಯ ಮಾಡುವ ಜವಾಬ್ದಾರಿ ಸಂಬಂಧದಲ್ಲಿ ಎರಡು ಜಂಟಿ ಕಾರ್ಯದರ್ಶಿ ಹುದ್ದೆಗಳಲ್ಲಿ ಒಂದು ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಅಪರ ಕಾರ್ಯದರ್ಶಿ ಹುದ್ದೆಗೆ ಉನ್ನತೀಕರಿಸಿ, ಜಂಟಿ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಿರಿಯ ಅಧಿಕಾರಿಯೊಬ್ಬರಿಗೆ ಬಡ್ತಿ ನೀಡುವಂತೆ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯ ಕಾರ್ಯದರ್ಶಿಯವರು ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 365 ಸಅಸೇ 2007 ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ರೂ. 24450–31800 ವೇತನ ಶ್ರೇಣಿಯ ಎರಡು ಜಂಟಿ ಪ್ರಾರೂಪಕಾರ ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ರೂ. 26250–36500ರ ವೇತನ ಶ್ರೇಣಿಯ ಅಪರ ಪ್ರಾರೂಪಕಾರ ಮತ್ತು ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ ಹುದ್ದೆಗೆ ತಾತ್ಕಾಲಿಕವಾಗಿ ಮುಂದೆ ಹುದ್ದೆ ಖಾಲಿಯಾಗುವ ಅವಧಿಗೆ ಮಾತ್ರ ಮೇಲ್ದರ್ಜೆಗೇರಿಸಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ 22–1–2008ರ ಟಿಪ್ಪಣಿ ಸಂಖ್ಯೆ: ಆಇ 2405 ವೆಚ್ಚ–5 2007ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 344

**ಕೆ.ಜಿ. ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3)

## ಸಹಕಾರ ಸಚಿವಾಲಯ

**ವಿಷಯ :** ಕರ್ನಾಟಕ ಸೆಂಟ್ರಲ್ ಕೋ–ಆಪರೇಟಿವ್ ಬ್ಯಾಂಕ್ ನಿಯಮಿತ, ಧಾರವಾಡ ಇದರ 2005–06 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶದ ಸಂಖ್ಯೆ ಸಿಒ 203 ಸಿಎಲ್ಎಂ 2007, ದಿನಾಂಕ 24–9–2007.

2. ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ವ್ಯವಸ್ಥಾಪಕರ ನಿರ್ದೇಶಕರ ಪತ್ರ ಸಂಖ್ಯೆ: 889/ಆಡಳಿತ/ಎಬಿ/2007, ದಿನಾಂಕ 11–12–2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಸೆಂಟ್ರಲ್ ಕೋ–ಆಪರೇಟೀವ್ ಬ್ಯಾಂಕ್ ನಿಯಮಿತ, ಧಾರವಾಡ ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 31–12–2007ರ ಅವಧಿಯೊಳಗೆ ನಡೆಸಲು ಅನುಮತಿಯನ್ನು ನೀಡಲಾಗಿದೆ. ಧಾರವಾಡ ಜಿಲ್ಲಾಧಿಕಾರಿಯವರು ಸದರಿ ಬ್ಯಾಂಕಿನ ಆಡಳಿತಗಾರರಾಗಿ ಕಾರ್ಯನಿರ್ವಹಿಸುತ್ತಿದ್ದು ಮುಂಬರುವ ಸಾರ್ವತ್ರಿಕ ಚುನಾವಣಾ ಪೂರ್ವ ತಯಾರಿ, ಮತದಾರರ ಪಟ್ಟಿ ಪರಿಷ್ಕರಣೆ ಮುಂತಾದ ಕೆಲಸಗಳಲ್ಲಿ ತೊಡಗಿರುವ ಪ್ರಯುಕ್ತ ಸದರಿ ಬ್ಯಾಂಕಿನ 2005–06 ಮತ್ತು 2006–07ನೇ ವಾರ್ಷಿಕ ಮಹಾಸಭೆಗಳನ್ನು ನಡೆಸಲು ನಿಗದಿತ ಅವಧಿಯನ್ನು ದಿನಾಂಕ 30–6–2008ರವರೆಗೆ ವಿಸ್ತರಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೆ.ಸಿ.ಸಿ. ಬ್ಯಾಂಕ್ ನಿ., ಧಾರವಾಡ ಇದರ ವ್ಯವಸ್ಥಾಪಕ ನಿರ್ದೇಶಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 281 ಸಿಎಲ್‌ಎಂ 2007, ಬೆಂಗಳೂರು, ದಿನಾಂಕ: 21ನೇ ಜನವರಿ 2008.**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸೆಂಟ್ರಲ್ ಕೋ–ಆಪರೇಟೀವ್ ಬ್ಯಾಂಕ್ ನಿಯಮಿತ, ಧಾರವಾಡ ಇದರ 2005–06 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾಸಭೆಗಳನ್ನು ನಡೆಸಲು ದಿನಾಂಕ 30–6–2008ರವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಸದರಿ ಬ್ಯಾಂಕಿಗೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಈ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

2005–06ನೇ ಸಾಲಿಗೆ ಸಂಬಂಧಪಟ್ಟಂತೆ 27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಇಪ್ಪತ್ತೊಂದು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

2006–07ನೇ ಸಾಲಿಗೆ ಸಂಬಂಧಪಟ್ಟಂತೆ 27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ "ಒಂಬತ್ತು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30–6–2008ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ಕ್ಕೆ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 178

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## HORTICULTURE SECRETARIAT

**Sub :** Establishment of Horticulture College at Bagalkote.

**Preamble:**

1. The diverse agro-climatic conditions prevailing in the State have been congenial for growing different horticulture crops all-round the year, successfully. The usefulness of growing horticulture crops has been specially felt in scanty rainfall areas and drought-prone areas of the State, as several perennial horticulture crops have been able to mitigate severe drought conditions and provide satisfactory yields. Farmers derive more profits by value addition to horticulture produce. Opportunities to export good quality horticulture produce to other countries have been increasing due to high-tech horticulture. Horticulture has given a new dimension to the profitability and sustainability of farming profession.

2. The present area under horticulture crops in the State has been 15.81 lakh hectares and the total production is 94.81 lakh tons. Although, the area under horticulture crops has been only 12% of the total cultivated area, the value of horticultural produce amounts to Rs. 8405 crores, which is about 40% of the total income derived from the combined agricultural sector.

3. Taking into consideration the importance of horticulture, the State Government has announced during the Budget Speech, 2007-08 at para 52 that Horticulture University be set up at Bagalkote with a budget provision of Rs. 10 crores.

4. The proposed Horticulture University will be taking up teaching, research ans extension activities pertaining to horticulture. For the purpose of establishing Horticulture University, Sri V.P. Baligar, Principal Secretary has been placed in additional charge as Special Officer along with present duties vide Notification dated 24-5-2007. In addition, a Special Officer has been appointed for starting Horticulture College at Bagalkote. Draft Bill for establishment of Horticulture University is also under consideration of the Government.

5. Acquisition of land required and pre-project activities for starting the Horticulture University at Bagalkote have been in progress. Meanwhile, the budget provision of Rs. 10 crores provided under the Head of Account 4401-00-800-2-00 and 2401-00-800-2-34 during the year 2007-08 should not go

unutilised. Horticulture College will be an integral part of Horticulture University. Hence, Government has taken the following decisions.

a) To commence Horticulture College at Bagalkote from the Academic year 2008-09 and to release Rs. 2.00 crores (Two crores) to University Agricultural Sciences, Dharwad from current year's budget for taking preliminary steps for buying necessary lab equipments and other essential items for starting the college with hostel facilities after following presceibed purchase rules.

b) Much earlier to the commencement of the College, Head of the College with necessary staff be placed in position for starting admission well in time and College can be started in the building identified by the Special Officer of the University.

c) Rs. 8.00 Crores (Eight crores) be released to Special Officer, Horticulture University, Bagalkote for meeting expenses towards pre-project activities including preparation of DPR, Curriculum development emphasising present day needs.

6. Hence, this order.

**Govt. Order No. AHD 83 HPP 2007, Bangalore, Dated 25th March 2008**

1. Government is pleased to permit University of Agricultural Sciences, Dharwad to commence Horticulture College at Bagalkote from the Academic year 2008-09. For this purpose Rs. 200.00 lakhs (Two Hundred lakhs) are released herewith to Univesity Agricultural Sciences, Dharwad from the budget of 2007-08 as below, for taking preliminary steps for buying necessary lab equipments and other essential items for starting the college with hostel facilities after following prescribed purchase rules.

2. Much earlier to the commencement of the College, Head of the College with necessary staff be placed in position for starting admission well in time and College can be started in the building identified by the Special Officerf of the University.

3. Rs. 800.00 lakhs (Eight Hundred lakhs) are released herewith to the Sepcial Officer, Horticulture University, Bagalkote from the budget of 2007-08 as below, for meeting expenses towards pre-project activities including preparation of DRP, Curriculum development emphasising present day needs.

| Sl. No. | To whom released | Head of Account | Amount (Rs. in lakhs) |
|---|---|---|---|
| 1 | University Agricultural Sciences, Dharwad | Horticulture University, Bagalkot 2401-00-800-2-34-059-Other expenditure | 100.00 |
| 2 | University Agricultural Sciences, Dharwad | Horticulture University, Bagalkot 4401-00-800-2-00-139-Major Works | 100.00 |
| 3 | Special Officer, Horticulture University, Bagalkote | Horticulture University, Bagalkot 4401-00-800-2-00-139-Major Works | 800.00 |

4. The amount will be drawn by the concerned through Grant-in-Aid bill and the Director of Horticulture is permitted to counter sign.

5. This order issues in concurrence with the Finance Department vide Note No. ಆಇ 159: ವೆಚ್ಚ:4:08 ದಿನಾಂಕ 25–3–2008.

By order and in the name of the President of India,

PR. 530

**S. RAJU**

Under Secretary to Government,

Horticulture Department.

**FOREST, ECOLOGY AND ENVIRONMENT SECRETARIAT**

**Sub :** Diversion of 2.35 ha. of forest land for alignment of optical fire cablef line from Sangatikoppa to Kodlegadde in 52 KM in Yellapur Division for laying optical cable line in favour of Hutch Company.

**Read :** 1. Letter No. A5(2)GFL.CR.14/07-08, dated 4-9-2007 of Principal Chief Conservator of Forests, Bangalore.
2. Government of India letter No. F.No. 11-9/98-FC, dated 21-11-2005.

**Preamble:**

The Principal Chief Conservator of Forests, Bangalore vide his letter dated 4-9-2007 read at (1) above has submitted the proposal for diversion of 2.35 ha. of forest land under the Forest (Conservation) Act, 1980 and Government of India guidelines dated 21-11-2005 cited under reference (2) above for alignment of optical fibre cable line from Sangatikoppa to Kodlegadde in 52 KM in Yellapur Division, U.K. District by Hutch Company subject to certain conditions.

The proposal has been examined in detail and hence the order.

**Government Order No. FEE 106 FLL 2007, Bangalore, Dated 7th February 2008**

In the circumstances explained in the preamble above, Government are pleased to accord approval under Forest (Conservation) Act, 1980 and guidelines dated 21-11-2005 of the Government of India for diversion of 2.35 ha. of forest land for alignment of optical fibre cable line from Sangatikoppa to Kodlegadde in 52 KM in Yellapur Division, U.K. District by Hutch Company subject to the following conditions.

1. The legal status of the forest land will continue to be as forest land.
2. The land shall be utilized only for the purpose for which it is released.
3. The user agency has to pay the lease rent as fixed by the Government at the time of sanction and any subsequent orders in this regard.
4. The lease is granted for 10 (ten) years.
5. The Karnataka Forest Act 1963 and Rules 1969 will be applicable for any violation.
6. If the land is not utilized for the purpose within 2 years, the forest land shall resumed back to Forest Department by the Conservator of Forests by following the provisions under Section 82 of the Karnataka Forest Act 1963.
7. The user agency has to pay the cost of raising compensatory afforestation charges at the rate provailing at the time of sanction (at present it is Rs. 54,200.00 per ha.)
8. The user agency has to pay the Net Present Value (NPV) as per the Govt. Notification dated 17-1-2004.
9. Any other condition imposed by the Government of India/ State Government/ Principal Chief Conservator of Forests, Bangalore will have to be abided by the lessee.

By order and in the name of the President of India,

PR. 503

**AHMED A MOKHTADAR**

Deputy Secretary to Government,

Forest, Ecology and Environment Department.

**ತೋಟಗಾರಿಕೆ ಸಚಿವಾಲಯ**

**ವಿಷಯ :** ಕರ್ನಾಟಕ ದ್ರಾಕ್ಷಾರಸ ಮಂಡಳಿಗೆ (Karnataka Grape Wine Board) ಷೇರು ಧನವನ್ನು ಬಿಡುಗಡೆ ಮಾಡುವ ಬಗ್ಗೆ –ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕೃತೋಇ 78 ತೋಯೋಕಾ 2007, ದಿ: 10–9–2007.
2. ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ತೋಅನಿ/ಹಣ್ಣು/ಸತೋಅ–2/59A/2007–08, ದಿ: 4–3–2008.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದ ರೈತರ ಹಿತದೃಷ್ಟಿಯಿಂದ ದ್ರಾಕ್ಷಾರಸ ಉತ್ಪಾದನಾ ಮತ್ತು ಮಾರುಕಟ್ಟೆಯನ್ನು ಅಭಿವೃದ್ಧಿಪಡಿಸುವ ದಿಶೆಯಲ್ಲಿ ಸೂಕ್ತ ಪ್ರೋತ್ಸಾಹ ನೀಡಲು ಸರ್ಕಾರವು "ಕರ್ನಾಟಕ ದ್ರಾಕ್ಷಿ ಸಂಸ್ಕರಣೆ ಮತ್ತು ದ್ರಾಕ್ಷಾರಸ (ವೈನ್) ನೀತಿ 2007" ಅನ್ನು ಜಾರಿಗೆ ತಂದಿರುತ್ತದೆ ಮತ್ತು ಈ ಅನ್ವಯ ಕರ್ನಾಟಕ ದ್ರಾಕ್ಷಾರಸ ಬೋರ್ಡ್‌ನ್ನು (Karnataka Grape Wine Board) ನೊಂದಾಯಿಸಲಾಗಿದೆ.

2. ಕರ್ನಾಟಕ ದ್ರಾಕ್ಷಿ ವೈನ್ ಬೋರ್ಡ್‌ಗೆ ತೋಟಗಾರಿಕೆ ಇಲಾಖೆಯಿಂದ ರೂ. 10.00 ಕೋಟಿ, ಕೆಪೆಕ್‌ನಿಂದ ರೂ. 8.00 ಕೋಟಿ ಮತ್ತು ಕರ್ನಾಟಕ ರಾಜ್ಯ ಪಾನೀಯ ನಿಗಮದಿಂದ ರೂ. 7.00 ಕೋಟಿಗಳು, ಒಟ್ಟು ರೂ. 25.00 ಕೋಟಿಗಳ ಷೇರುಧನ ತೊಡಗಿಸಬೇಕಾಗಿದೆ.

3. 2007–08ನೇ ಸಾಲಿನ ಆಯವ್ಯಯದಲ್ಲಿ "ದ್ರಾಕ್ಷಾರಸ ನೀತಿ" ಎಂಬ ಹೊಸ ಯೋಜನೆಯನ್ನು ಘೋಷಿಸಲಾಗಿದ್ದು ಲೆಕ್ಕಶೀರ್ಷಿಕೆ 2401–00–800–2–36ರಡಿ ರೂ. 400.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದ್ದು ಮೇಲೆ ಓದಲಾದ (1) ಆದೇಶದಲ್ಲಿ ರೂ. 133.00 ಲಕ್ಷಗಳನ್ನು ತೋಟಗಾರಿಕೆ ಇಲಾಖೆಯು ಷೇರು ಧನವನ್ನಾಗಿ ನೀಡಲಾಗಿದೆ.

4. ತೋಟಗಾರಿಕೆ ನಿರ್ದೇಶಕರು ಮೇಲೆ ಓದಲಾದ (2)ರ ಪತ್ರದಲ್ಲಿ ಸದರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಬಾಕಿ ಇರುವ ರೂ. 267.00 ಲಕ್ಷಗಳನ್ನು ಕರ್ನಾಟಕ ದ್ರಾಕ್ಷಾರಸ ಮಂಡಳಿಗೆ ಷೇರು ದನವನ್ನಾಗಿ ನೀಡಲು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

5. ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 78 ತೊಯೋಕಾ 2007, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಗಳ ಹಿನ್ನೆಲೆಯಲ್ಲಿ 2007–08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2401–00–800–2–36 (ಯೋಜನೆ) ಅಡಿ ರೂ. 267.00 ಲಕ್ಷಗಳನ್ನು (ರೂಪಾಯಿ ಎರಡು ನೂರ ಅರವತ್ತೇಳು ಲಕ್ಷಗಳು ಮಾತ್ರ) ಕರ್ನಾಟಕ ದ್ರಾಕ್ಷಾರಸ ಮಂಡಳಿಗೆ (Karnataka Grape Wine Board) ಷೇರುಧನವನ್ನಾಗಿ ಬಿಡುಗಡೆ ಮಾಡಲು ಸರ್ಕಾರವು ಅನುಮತಿಯನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 248 ವೆಚ್ಚ.4/07, ದಿನಾಂಕ: 15–3–2008ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 514

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ರಚಿಸಲು ಸಂಭಾವನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 17 ಕರಾಗೆ 2007, ದಿನಾಂಕ 3–1–2008.

2. ಮುಖ್ಯ ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ ಅವರ ಪತ್ರ ಸಂಖ್ಯೆ: ಕಗ್ಯಾಇ/ಸಿ(2)/ ಚಾಜಿಗ್ಯಾ/2007–08/481, ದಿನಾಂಕ 7–2–2008.

**ಪ್ರಸ್ತಾವನೆ :**

ಗ್ಯಾಸೆಟಿಯರ್ ಇಲಾಖೆ ವತಿಯಿಂದ ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಏಳು ಅಧ್ಯಾಯಗಳ ಸಂಪಾದನಾ ಕಾರ್ಯವನ್ನು ಹೊರಗಿನ ವಿದ್ವಾಂಸರಿಂದ ರಚಿಸಲು ಸಂಭಾವನೆ ನೀಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮುಖ್ಯ ಸಂಪಾದಕರು ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರಿಗೆ ಮಂಜೂರಾತಿ ನೀಡಲಾಗಿತ್ತು. ಮುಖ್ಯ ಸಂಪಾದಕರು, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಇನ್ನೂ ಎರಡು ಅಧ್ಯಾಯಗಳ ರಚನೆಯನ್ನು ಹೊರಗಿನ ವಿದ್ವಾಂಸರಿಗೆ ವಹಿಸಿಕೊಡಬೇಕಾದ ಅನಿವಾರ್ಯತೆ ಇರುವುದರಿಂದ ಪ್ರತಿ ಅಧ್ಯಾಯ ಕಾರ್ಯಕ್ಕೆ ರೂ. 20,000/–ದಂತೆ ಒಟ್ಟು ರೂ. 40,000/–ಗಳ ಸಂಭಾವನೆ ವೆಚ್ಚಕ್ಕೆ ಮಂಜೂರಾತಿ ನೀಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 17 ಕರಾಗೆ 2007 ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಗ್ಯಾಸೆಟಿಯರ್ ಇಲಾಖೆಯ ವತಿಯಿಂದ ಚಾಮರಾಜನಗರ ಜಿಲ್ಲಾ ಗ್ಯಾಸೆಟಿಯರ್ ಸಂಪುಟದ ಎರಡು ಅಧ್ಯಾಯಗಳನ್ನು ಹೊರಗಿನ ವಿದ್ವಾಂಸರಿಂದ ನಿರ್ವಹಿಸಲು ತಗಲುವ ವೆಚ್ಚ ರೂ. 40,000/– (ರೂಪಾಯಿ ನಲ್ವತ್ತು ಸಾವಿರಗಳು ಮಾತ್ರ) ವನ್ನು (ತಲಾ ರೂ. 20,000/–ದಂತೆ) ಮುಖ್ಯ ಸಂಪಾದಕರು, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

ಈ ಸಂಬಂಧವಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 3454–02–110–0–01–059 (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖೆಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 519

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಕಂದಾಯ ಸಚಿವಾಲಯ**

**ವಿಷಯ :** ಬಿಜಾಪುರ ಜಿಲ್ಲೆ, ಶ್ರೀ ಕ್ಷೇತ್ರ ಇಂಚಗೇರಿ ಮಠದ ಶ್ರೀ ಸ.ಸ. ಗಿರಿಮಲ್ಲೇಶ್ವರ ಮಹಾರಾಜರ ದೇವಾಲಯಕ್ಕೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:** 1. ಅಧ್ಯಕ್ಷರು, ಶ್ರೀ ಸ.ಸ. ಗಿರಿಮಲ್ಲೇಶ್ವರ ಮಹಾರಾಜರ ದೇವಾಲಯದ ಕಟ್ಟಡ ಸಮಿತಿರವರ ಮನವಿ ದಿನಾಂಕ 13–3–2007.

2. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಸಿಎನ್‌ಆರ್.2.ಸಿ.ಆರ್.29/2007–08, ದಿನಾಂಕ 31–1–2008.

3. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 147 ಬಿಆರ್‌ಎಸ್ 2008, ದಿ: 29–2–2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಮನವಿಯಲ್ಲಿ ಶ್ರೀ ಕ್ಷೇತ್ರ ಇಂಚಗೇರಿ ಮಠದ ಶ್ರೀ ಸ.ಸ. ಗಿರಿಮಲ್ಲೇಶ್ವರ ಮಹಾರಾಜರ ದೇವಾಲಯಕ್ಕೆ ಸರ್ಕಾರದಿಂದ ರೂ. 4.00 ಲಕ್ಷ ಅನುದಾನ ಮಂಜೂರಾಗಿದ್ದು, ಸದರಿ ಅನುದಾನವನ್ನು ಉಪಯೋಗಿಸಿಕೊಳ್ಳಲಾಗಿದೆ ಎಂದು ಇನ್ನು ರೂ. 6.00 ಲಕ್ಷ ಅನುದಾನ ಮಂಜೂರು ಮಾಡಲು ಕೋರಿಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಶ್ರೀ ಕ್ಷೇತ್ರ ಇಂಚಗೇರಿ ಮಠ ಸರ್ಕಾರದಿಂದ ರೂ. 4.00 ಲಕ್ಷ ಅನುದಾನ ಮಂಜೂರಾಗಿದ್ದು, ಸದರಿ ಅನುದಾನದಿಂದ ದೇವಸ್ಥಾನದ ಕಟ್ಟಡ ಮೇಲ್‌ಛಾವಣಿ ಹಾಗೂ ದೇವಸ್ಥಾನದ ಉದ್ದೇಶಿತ ಕಾಮಗಾರಿಗೆ ಉಪಯೋಗಿಸಿರುತ್ತಾರೆ ಎಂದು ಸರ್ಕಾರಕ್ಕೆ ವರದಿ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (3)ರ ದಿನಾಂಕ 29–2–2008ರ ಆದೇಶದಲ್ಲಿ ಆರ್ಥಿಕ ಇಲಾಖೆಯು ಲೆಕ್ಕ ಶೀರ್ಷಿಕೆ 2250–00–800–1–03–200 (ಯೋಜನೇತರ) ರಡಿಯಲ್ಲಿ ರೂ. 6.00 ಲಕ್ಷಗಳನ್ನು ಹೆಚ್ಚುವರಿ ಮೊತ್ತದ ಅನುದಾನವನ್ನು ಮಂಜೂರು ಮಾಡಿದೆ. ಈ ಹಿನ್ನೆಲೆಯಲ್ಲಿ ಮುಂದಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ ಮುಅಬಿ 2005, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2008.**

ಬಿಜಾಪುರ ಜಿಲ್ಲೆ, ಇಂಚಗೇರಿ ಮಠದ ಶ್ರೀ ಸ.ಸ. ಗಿರಿಮಲ್ಲೇಶ್ವರ ಮಹಾರಾಜರ ಕಟ್ಟಡ ನಿರ್ಮಾಣ ಉದ್ದೇಶಕ್ಕಾಗಿ ಲೆಕ್ಕ ಶೀರ್ಷಿಕೆ 2250–00–800–1–03–200 (ಯೋಜನೇತರ) ರಡಿಯಲ್ಲಿ ರೂ. 6.00 ಲಕ್ಷಗಳನ್ನು ಹೆಚ್ಚುವರಿಯಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರು ಅನುದಾನದ ಬಿಲ್‌ನಲ್ಲಿ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ ಸದರಿ ಮೊತ್ತವನ್ನು ಖಜಾನೆಯಿಂದ ಪಡೆದು ಸಂಬಂಧಪಟ್ಟ ಜಿಲ್ಲಾಧಿಕಾರಿ, ಬಿಜಾಪುರರವರಿಗೆ ವಿವರಿಸಲು ಮಂಜೂರಾತಿ ನೀಡಿ ಆದೇಶಿಸಿದೆ.

ಈ ಯೋಜನೆಗೆ ಸಂಬಂಧಿಸಿದಂತೆ ಅಂದಾಜುಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆದ ನಂತರ ಕಾಮಗಾರಿಯ ಅನುಷ್ಠಾನಕ್ಕಾಗಿ ಬಿಡುಗಡೆ ಮಾಡುವುದು.

ಈ ಆದೇಶದಲ್ಲಿ ಬಿಡುಗಡೆಗೊಳಿಸಲಾದ ಹೆಚ್ಚುವರಿ ಅನುದಾನವನ್ನು ಬೇಡಿಕೆ ಸಂಖ್ಯೆ: 14ರಲ್ಲಿನ ಒಟ್ಟಾರೆ ಉಳಿತಾಯದಿಂದ ಮರು ಹೊಂದಾಣಿಕೆ ಮಾಡುವ ಮೂಲಕ ಪ್ರಸಕ್ತ ಆರ್ಥಿಕ ವರ್ಷದ ಅಂತ್ಯದೊಳಗೆ ಸಕ್ರಮಗೊಳಿಸಬೇಕಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 495

**ಎಲ್.ಎಸ್. ಶ್ರೀಕಂಠಬಾಬು**

ಪೀಠಾಧಿಕಾರಿ

ಕಂದಾಯ ಇಲಾಖೆ (ಮುಜರಾಯಿ)

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಬಸವರಾಜಪ್ಪ, ಡಿವೈ.ಎಸ್.ಪಿ ಮತ್ತು ಶ್ರೀ ಎಸ್.ಆರ್. ಪಾಟೀಲ್ ರವರುಗಳ ಮೇಲೆ ಜಂಟಿ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಒಇ 296 ಮೊಸಿಪ 96 ದಿನಾಂಕ 18–03–97.

2) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ(5)45/93–94 ದಿನಾಂಕ 12–12–2007.

**ಪ್ರಸ್ತಾವನೆ:**

ಅಳಂದ ಪೊಲೀಸ್ ಠಾಣೆಯ ಯು.ಡಿ.ಆರ್.ಸಂಖ್ಯೆ: 18:90 ಕಲಂ 174 ಸಿ.ಆರ್.ಪಿ.ಸಿ. ಪ್ರಕರಣದಲ್ಲಿ ಕ್ರಮಬದ್ಧವಾದ ತನಿಖೆ ಮಾಡದೆ ಕರ್ತವ್ಯ ನಿರ್ಲಕ್ಷತೆ ತೋರಿದರೆಂಬ ಆಪಾದನೆ ಬಗ್ಗೆ ಶ್ರೀ ಬಸವರಾಜಪ್ಪ, ಡಿವೈ.ಎಸ್.ಪಿ ಮತ್ತು ಶ್ರೀ ಎಸ್.ಆರ್. ಪಾಟೀಲ್, ಪೊಲೀಸ್ ಇನ್ಸ್‌ಪೆಕ್ಟರ್‌ಗಳ ವಿರುದ್ಧ ದಿನಾಂಕ 18–03–97ರಲ್ಲಿ ಇಲಾಖಾ ವಿಚಾರಣೆಗೆ

ಆದೇಶಿಸಲಾಗಿದ್ದು, ಸದರಿ ಇಲಾಖಾ ವಿಚಾರಣೆಯನ್ನು ನಡೆಸಲು ಎಸ್.ಪಿ, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು.

ಎಸ್.ಪಿ. ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿಗಳು ದಿನಾಂಕ 07–05–2005ರಂದು ತಮ್ಮ ಪತ್ರದಲ್ಲಿ ಇಲಾಖಾ ವಿಚಾರಣೆಯನ್ನು ಮುಂದುವರೆಸುವ ಬಗ್ಗೆ ಡಿಜಿಪಿ ರವರ ಸ್ಪಷ್ಟೀಕರಣವನ್ನು ಕೋರಿದ್ದು ಡಿಜಿಪಿ ರವರು ಇಲಾಖಾ ವಿಚಾರಣೆಗೆ ಆದೇಶಿಸಿ 9 ವರ್ಷಗಳು ಕಳೆದರೂ ಇನ್ನೂ ಪ್ರಾರಂಭಿಕ ಹಂತದಲ್ಲಿರುವುದರಿಂದ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ದಿನಾಂಕ 16–07–2005ರಲ್ಲಿ ಕೋರಿರುತ್ತಾರೆ. ಸರ್ಕಾರದಿಂದ ದಿನಾಂಕ 30–09–2005ರಲ್ಲಿ ಇಲಾಖಾ ವಿಚಾರಣೆಯನ್ನು ಪೂರ್ಣಗೊಳಿಸಿ ವರದಿಯನ್ನು ನೀಡಲು ಸೂಚಿಸಲಾಗಿತ್ತು.

ಇಲಾಖಾ ವಿಚಾರಣಾಧಿಕಾರಿಗಳು ಸಲ್ಲಿಸಿರುವ ಅಂತಿಮ ವರದಿಯನ್ನು ಡಿಜಿಪಿ ರವರು ತಮ್ಮ ದಿನಾಂಕ 12–12–2007ರ ಪತ್ರದಲ್ಲಿ ಸರ್ಕಾರಕ್ಕೆ ಅಂತಿಮ ಆದೇಶಕ್ಕೆ ಸಲ್ಲಿಸಿರುತ್ತಾರೆ.

The charges against the Accused officials were as under:

1) Sri Basawarajappa, DSP formerly CPI Aland had not visited to the spot in Aland P.S.UDR No.1/90 u/s 174 Cr.Pc. and also failed to report the facts to the superiors about the lapses of Sri.S.R.Patil, PSI of Aland P.S. in investigation of this UDR case, since it related to dowry death.

2) Sri. S.R. Patil, PI formerly PSI of Aland P.S. had not visited to the spot immediately in Aland P.S. UDR No.18/90 u/s Cr.Pc. and on the other hand, he had deputed ASI and staff for conducting inquest.

ಶ್ರೀ ಬಸವರಾಜಪ್ಪ, ಡಿವೈ.ಎಸ್.ಪಿ, ಇವರು ದಿನಾಂಕ 14–08–2007ರಂದು ನಿಧನರಾದುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯ ಮುಂದಿನ ಕ್ರಮ ಕೈಗೊಂಡಿಲ್ಲವೆಂದು ವಿಚಾರಣಾಧಿಕಾರಿಗಳು ತಮ್ಮ ವರದಿಯಲ್ಲಿ ತಿಳಿಸಿರುತ್ತಾರೆ. ಮುಂದುವರೆದು ಶ್ರೀ ಎಸ್.ಆರ್. ಪಾಟೀಲ್, ಸಿ.ಪಿ.ಐ., ಹಿಂದಿನ ಪಿ.ಎಸ್.ಐ, ಅಳಂದ ಇವರ ವಿಚಾರಣೆಯಲ್ಲಿ ಐವರು ಪ್ರಾಸಿಕ್ಯೂಷನ್ ಸಾಕ್ಷಿಗಳನ್ನು ಹಾಗೂ ದಾಖಲಾತಿಗಳನ್ನು ಹಾಗೂ ವಾದಗಳನ್ನು ಪರಿಶೀಲಿಸಿದ ವಿಚಾರಣಾಧಿಕಾರಿಗಳು ಶ್ರೀ ಎಸ್.ಆರ್. ಪಾಟೀಲ್ ವಿರುದ್ಧದ ದೋಷಾರೋಪಣೆ ಸಾಭೀತಾಗಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 296 ಪೊಸಿಪ 96, ಬೆಂಗಳೂರು, ದಿನಾಂಕ: 16ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಬಸವರಾಜಪ್ಪ, ಡಿವೈ.ಎಸ್.ಪಿ ರವರು ಮೃತಪಟ್ಟಿರುವುದರಿಂದ ಇವರ ಹೆಸರನ್ನು ಇಲಾಖಾ ವಿಚಾರಣೆಯಿಂದ ಕೈಬಿಡಲಾಗಿದೆ ಮತ್ತು ಶ್ರೀ ಎಸ್.ಆರ್. ಪಾಟೀಲ್, ಸಿ.ಪಿ.ಐ, ಹಿಂದಿನ ಪಿ.ಎಸ್.ಐ. ಆಳಂದ ಇವರ ವಿರುದ್ಧ ಆರೋಪಗಳು ಸಾಭೀತಾಗಿರುವುದಿಲ್ಲದಿರುವುದರಿಂದ ಇವರನ್ನು ಇಲಾಖಾ ವಿಚಾರಣೆಯ ದೊಷಾರೋಪಣೆಗಳಿಂದ ದೋಷಮುಕ್ತಗೊಳಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 141

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್. ಬಸವರಾಜು, ಸಿಪಿಸಿ–237, ಆಲ್ದೂರು ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣಾ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರ ಆದೇಶ ಸಂಖ್ಯೆ: ಡಿಇ: 1:2003 ಓಬಿ ನಂ:84 ದಿನಾಂಕ:30–03–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ 2:ಮೇಲ್ಮನವಿ:4:05–06 ದಿ:11–07–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25–10–2005.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು:(2):132:2006–07 ದಿನಾಂಕ:05–05–2007
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 193:CNS 2007 ದಿನಾಂಕ: 01–04–2008

**ಪ್ರಸ್ತಾವನೆ:**

ಶ್ರೀ ಎನ್. ಬಸವರಾಜು, ಸಿಪಿಸಿ–237, ಆಲ್ದೂರು ಪೊಲೀಸ್ ಠಾಣೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಆರೋಪಿ ಪೊಲೀಸ್ ಅಧಿಕಾರಿಗಳಾದ ಬಿ.ಆರ್. ಚಂದ್ರಪ್ಪ, ಸಿ.ಹೆಚ್.ಸಿ.–15 ಮತ್ತು ಶ್ರೀ. ಬಸವರಾಜು ಸಿಪಿಸಿ–237 ರವರು ಕೊಪ್ಪ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:30–06–2007 ರಂದು ರಾತ್ರಿ 8–30 ರಿಂದ 8–45 ಘಂಟೆ ಸಮಯದಲ್ಲಿ ಕೊಪ್ಪ ನಗರದ ಮುಖ್ಯರಸ್ತೆಯಲ್ಲಿರುವ ಸಿದ್ಧಿಕ್ ಅಹಮದ್ ಎಂಬುವರ ಅಂಗಡಿಯ ಮುಂದೆ ಪಾನಮತ್ತರಾಗಿ ಸಾರ್ವಜನಿಕ ಸ್ಥಳದಲ್ಲಿ ಮನೆ ಬಾಡಿಗೆ ವಿಚಾರದಲ್ಲಿ ಪರಸ್ಪರ ಅವಾಚ್ಯ ಶಬ್ದಗಳಿಂದ ಬೈದಾಡಿಕೊಂಡು ಕೆಳಗೆ ಬಿದ್ದಾಡಿ ಹೊರಳಾಡಿ ಹೊಡೆದಾಡಿಕೊಂಡು ಅಸಭ್ಯವಾಗಿ ವರ್ತಿಸಿ ದುರ್ನಡತೆ ಪ್ರದರ್ಶಿಸುವುದರೊಂದಿಗೆ ಶಿಸ್ತಿನ ನೌಕರರಾಗಿ ಅಶಿಸ್ತಿನಿಂದ ವರ್ತಿಸಿ ಇಲಾಖೆಗೆ ಕಳಂಕ ತರುವಂತಹ ದುಷ್ಕೃತ್ಯವನ್ನು ಎಸಗಿದ್ದಾಗಿರುತ್ತದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 30–03–2005ರ ಆದೇಶದಲ್ಲಿ ಅರ್ಜಿದಾರರರಿಗೆ ಸೇವೆಯಿಂದ ಕಡ್ಡಾಯ ನಿವೃತ್ತಿ ದಂಡನೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯನ್ನು ಪರಿಗಣಿಸಿ ಶಿಸ್ತುಪ್ರಾಧಿಕಾರ ವಿಧಿಸಿರುವ ದಂಡನೆಯನ್ನು ಭಾಗಶ: ಮಾರ್ಪಡಿಸಿ ಅರ್ಜಿದಾರರನ್ನು ಸೇವೆಗೆ ಪುನರ್ ಸ್ಥಾಪಿಸಿ ಅರ್ಜಿದಾರರ ವೇತನವನ್ನು ಸಿಪಿಸಿ ಹುದ್ದೆಯ ವೇತನ ಶ್ರೇಣಿಯ ಕನಿಷ್ಠ ವೇತನಕ್ಕೆ 2 ವರ್ಷಗಳ ಕಾಲ ತದನಂತರ ಗಳಿಸುವ ವಾರ್ಷಿಕ ವೇತನ ಭತ್ಯೆಗಳ ಮೇಲೆ ಪರಿಣಾಮ ಬೀರುವಂತೆ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:11–07–2005ರ ಆದೇಶದಲ್ಲಿ ಮೇಲ್ಮನವಿಯನ್ನು ಪುರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಎನ್. ಬಸವರಾಜು, ಸಿಪಿಸಿ–237, ಆಲ್ದೂರು ಪೊಲೀಸ್ ಠಾಣೆ, ರವರಿಗೆ ಮೇಲ್ಮನವಿ ಪ್ರಾಧಿಕಾರ ವಿದಿಸಿದ್ದ ದಂಡನೆಯನ್ನು ಬಾಗಶ: ಮಾರ್ಪಡಿಸಿ ಇವರ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ 2ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲು ತೀರ್ಮಾನಿಸಿದೆ, ಆದ ಕಾರಣ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 190 ಪೊಸಿಅ 2007 ಬೆಂಗಳೂರು, ದಿನಾಂಕ: 02ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್. ಬಸವರಾಜು, ಸಿಪಿಸಿ–237, ಆಲ್ದೂರು ಪೊಲೀಸ್ ಠಾಣೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಶ್ರೀ ಎನ್. ಬಸವರಾಜು, ಸಿಪಿಸಿ–237, ಆಲ್ದೂರು ಪೊಲೀಸ್ ಠಾಣೆ, ಇವರಿಗೆ ಮೇಲ್ಮನವಿ ಪ್ರಾಧಿಕಾರ ವಿಧಿಸಿದ್ದ ದಂಡನೆಯನ್ನು ಭಾಗಶ: ಮಾರ್ಪಡಿಸಿ ಇವರ ಎರಡು ವಾರ್ಷಿಕ ವೇತನ ಮುಂಬಡ್ತಿಗಳನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳೀಗೆ ಧಕ್ಕೆಯಾಗದಂತೆ ಎರಡು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಲು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಪತ್ರ ಸಂಖ್ಯೆ: PSC 193: CNS 2007 ದಿನಾಂಕ: 01–04–2008ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 940

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಎಂ. ಗಾಡಿವಡ್ಡರ್, ಸಿಪಿಸಿ–2419, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾಂ ಇವರ ಆದೇಶ ಸಂಖ್ಯೆ: ಸಿಬ್ಬಂದಿ: 2:ಇವಿ:20:2004 (ಆಪು:ಸಂ:197:05) ದಿನಾಂಕ:22–03–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಉತ್ತರ ವಲಯ, ಬೆಳಗಾಂ ಇವರ ಆದೇಶ ಸಂಖ್ಯೆ:ಅಪೀಲು 26:ಉವ:05 ದಿನಾಂಕ:04–10–2005.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:20–12–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು ಸಂ:(2)112:2007–08, ದಿನಾಂಕ:25–03–2008

**ಪ್ರಸ್ತಾವನೆ:**

ಶ್ರೀ ಎಸ್.ಎಂ. ಗಾಡಿವಡ್ಡರ್, ಸಿಪಿಸಿ–2419, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಎಸ್.ಎಂ. ಗಾಡಿವಡ್ಡರ್, ಸಿಪಿಸಿ–2419, ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ನೀವು ದಿನಾಂಕ: 06–07–2004 ರಂದು ಮಧ್ಯಾಹ್ನ 1300 ಗಂಟೆಯ ಸುಮಾರಿಗೆ ಶ್ರೀಮತಿ ಕವಿತಾ ಅಶೋಕ ಬಂಡಾರಿ ಸಾ:ಶಹಾಪೂರ ಇವಳ ಜಂಪರ ಹಿಡಿದು ಜಗ್ಗಾಡಿ ಮಾನಭಂಗ ಮಾಡಲು ಪ್ರಯತ್ನಿಸಿರುತ್ತೀರಿ ಮತ್ತು ಅವಳ ಜೊತೆಗೆ ಇದ್ದವರು ಆಕ್ಷೇಪಿಸಿದಾಗ ಅವರಿಗೆ ಅವಾಚ್ಯ ಶಬ್ದಗಳಿಂದ ಬೈದು ಜೀವಬೆದರಿಕೆ ಹಾಕಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕಾಧೀಕ್ಷಕರು, ಬೆಳಗಾಂ ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 22–03–2005ರ ಆದೇಶದಲ್ಲಿ ಅರ್ಜಿದಾರರಿಗೆ ಅವರ ವೇತನವನ್ನು ಸಿಪಿಸಿ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಉತ್ತರ ವಲಯ, ಬೆಳಗಾಂ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04–10–2005ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ತಮ್ಮ ವಿರುದ್ಧ ನ್ಯಾಯಾಲಯದಲ್ಲಿ ಹೂಡಲಾದ ಪ್ರಕರಣದಲ್ಲಿ ನ್ಯಯಾಲಯವು ದೋಷಮುಕ್ತಗೊಳಿಸಿರುವುದರಿಂದ ಇಲಾಖಾ ವಿಚಾರಣೆಯಲ್ಲಿನ ಶಿಕ್ಷೆಯನ್ನು ರದ್ದುಗೊಳಿಸಲು ಅರ್ಜಿದಾರರು ಕೋರಿರುತ್ತಾರೆ. ನ್ಯಾಯಾಂಗ ವಿಚಾರಣೆ ಮತ್ತು ಇಲಾಖಾ ವಿಚಾರಣೆಯು ಬೇರೆಬೇರೆಯಾಗಿದ್ದು, ನ್ಯಾಯಾಂಗ ವಿಚಾರಣೆಯು ಭಾರತೀಯ ದಂಡ ಸಂಹಿತೆಯ ಕಲಂಗಳನ್ನು ಉಲ್ಲಂಘಿಸಿದ್ದಕ್ಕೆ ನಡೆದರೆ ಇಲಾಖಾ ವಿಚಾರಣೆಯು ಇಲಾಖೆಯಲ್ಲಿ ದುರ್ನಡತೆ ಎಸಗಿದ ಆಪಾದನೆ ಮೇಲೆ ನಡೆದಿರುತ್ತದೆ. ಇಲಾಖಾ ವಿಚಾರಣೆಯಲ್ಲಿನ ಸಾಕ್ಷಿಗಳ ಹೇಳಿಕೆಗಳಿಂದ ಅರ್ಜಿದಾರರ ಮೇಲಿನ ಆರೋಪವು ಸ್ಥಿರಪಟ್ಟಿರುತ್ತದೆ. ನ್ಯಾಯಾಂಗ ವಿಚಾರಣೆಯಲ್ಲಿ ದೋಷಮುಕ್ತ ಮಾಡಿದ್ದರಿಂದಲೇ ಇಲಾಖಾ ವಿಚಾರಣೆಯಲ್ಲಿಯೂ ಕೂಡ ದೋಷಮುಕ್ತ ಮಾಡಬೇಕೆಂಬ ಅರ್ಜಿದಾರರ ವಾದವನ್ನು ಒಪ್ಪಲಾಗುವುದಿಲ್ಲ. ಅಲ್ಲದೆ, ಇವರ ವಿರುದ್ಧ ದೋಷಾರೋಪಣೆಗಳು ಗಂಭೀರ ಸ್ವರೂಪದ್ದಾಗಿದ್ದು, ಮಹಿಳೆಯ ಮಾನಭಂಗ ಪ್ರಯತ್ನಕ್ಕೆ ಸಂಬಂಧಿಸಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರ ವಿಧಿಸಿರುವ ಶಿಕ್ಷೆಯು ಸಮಂಜಸವಾಗಿದ್ದುದರಿಂದ, ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 100 ಪೊಸಿಅ 2008 ಬೆಂಗಳೂರು, ದಿನಾಂಕ: 27ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಂ. ಗಾಡಿವಡ್ಡರ್, ಸಿಪಿಸಿ–2419,

ಟಿಳಕವಾಡಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.884

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗೋವಿಂದೇಗೌಡ, ಪಿ.ಎಸ್.ಐ., ನರಸಿಂಹರಾಜ ಪೊಲೀಸ್ ಠಾಣೆ, ಮೈಸೂರು, ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು (2):07:01-02 ದಿನಾಂಕ: 19-02-2002.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14-06-2002.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು:2(7):2001-02 ದಿನಾಂಕ:24-07-2006.
4) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 166: CNS 2007 ದಿನಾಂಕ: 02-04-2008.

**ಪ್ರಸ್ತಾವನೆ:**

ಶ್ರೀ ಗೋವಿಂದೇಗೌಡ, ಪಿ.ಎಸ್.ಐ., ನರಸಿಂಹರಾಜ ಪೊಲೀಸ್ ಠಾಣೆ, ಮೈಸೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಗೋವಿಂದೇಗೌಡ, ಪಿ.ಎಸ್.ಐ., ನರಸಿಂಹರಾಜು ಠಾಣೆ, ಮೈಸೂರು ಇವರು ದಿ: 24-02-2001 ರಂದು ಬೆಳಿಗ್ಗೆ 8-00 ಗಂಟೆಯಿಂದ ಮಧ್ಯಾಹ್ನ 14-00 ಗಂಟೆಯವರೆಗೆ ಮೈಸೂರು-ಬೆಂಗಳೂರು ರಸ್ತೆಯಲ್ಲಿ ಚೆಕ್‌ಪೋಸ್ಟ್ ಮುಖೇನ ಕೆ.ಎ-09 ಎಂ.8718 ಮಾರುತಿ ಓಮ್ನಿ, ಕೆ.ಎ-09 ಪಿ.4352 ಮಾರುತಿ ಕಾರು ಮತ್ತು ಕೆ.ಎ-01 ಎಂ.1669 ಕಾರು ಈ ವಾಹನಗಳು ಹೊರಹೋಗಿದ್ದು, ಸದರಿ ವಾಹನಗಳನ್ನು ಚೆಕ್ ಮಾಡದೇ ದೂರದಲ್ಲಿ ವಿಶ್ರಮಿಸುತ್ತಿದ್ದುದಲ್ಲದೇ ಸದರಿ ವಾಹನಗಳನ್ನು ಚೆಕ್ ಮಾಡಿದ್ದಾಗಿ ಪುಸ್ತಕದಲ್ಲಿ ನಮೂದಿಸಿ ಕರ್ತವ್ಯದಲ್ಲಿ ಉದಾಸೀನತೆ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 19-02-2002ರ ಆದೇಶದಲ್ಲಿ ಅರ್ಜಿದಾರರಿಗೆ ಮುಂಬರುವ ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯ ಬಡ್ತಿಗೆ ಧಕ್ಕೆಯಾಗದಂತೆ 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶ್ರೀ ಗೋವಿಂದೇಗೌಡ, ಪಿ.ಎಸ್.ಐ., ನರಸಿಂಹರಾಜು ಠಾಣೆ, ಮೈಸೂರು, ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ 2 ವರ್ಷಗಳ ಕಾಲ ಮುಂದೂಡಲಾಗಿದೆ. ಈ ದಂಡನಾವಧಿಯು ದಿ: 01-08-2001 ರಿಂದ 31-07-2003ರ ವರೆಗೆ ಜಾರಿಯಲ್ಲಿರುತ್ತದೆ. ಆದರೆ ಸದರಿಯವರು ದಂಡನಾವಧಿಯಲ್ಲಿಯೇ ಅಂದರೆ ದಿ:14-06-2003 ರಂದು ನಿಧನರಾಗಿರುತ್ತಾರೆ. ಹಾಗಾಗಿ ದಂಡನಾದೇಶವನ್ನು ಪೂರ್ಣವಾಗಿ ಅನುಷ್ಠಾನಗೊಳಿಸಲು ಸಾಧ್ಯವಾಗಿರುವುದಿಲ್ಲ. ಆದ್ದರಿಂದ ಇವರ ದಂಡನದೇಶವನ್ನು ಭಾಗಶ: ಮಾರ್ಪಡಿಸಿ ಅವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆ ಆಗದಂತೆ ಒಂದು ವರ್ಷದ ಕಾಲ ಮುಂದೂಡಿದ ದಂಡನೆ ವಿಧಿಸಬಹುದೆಂದು ತೀರ್ಮಾನಿಸಲಾಗಿತ್ತು. ಅದರಂತೆ ಕರ್ನಾಟಕ ಲೋಕ ಸೇವಾ ಆಯೋಗಕ್ಕೆ ದಿ: 16-10-2007 ರಂದು ಸಹಮತಿ ಕೋರಿ ಪತ್ರ ಬರೆಯಲಾಗಿತ್ತು. ಅರ್ಜಿದಾರರು ನಿಧನರಾಗಿರುವುದರಿಂದ ಇದು ನಿಯಮಾನುಸಾರ ಸಿಂಧುವೇ ಎಂದು ಕರ್ನಾಟಕ ಲೋಕ ಸೇವಾ ಆಯೋಗವು ಸರ್ಕಾರದಿಂದ ಮಾಹಿತಿ ಕೋರಿರುತ್ತಾರೆ. ಸದರಿಯವರು ನಿಧನರಾಗಿರುವುದರಿಂದ ಇದನ್ನು ಮಾನವೀಯತೆ ದೃಷ್ಠಿಯಿಂದ ಪರಿಗಣಿಸಿ ಅವರ ಮೇಲ್ಮನವಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸಿ ಇವರ ವೇತನವನ್ನು ಸಕ್ರಮಗೊಳಿಸಲು ಸರ್ಕಾರ ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 25 ಪೊಸಿಅ 2007 ಬೆಂಗಳೂರು, ದಿನಾಂಕ: 6ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಗೋವಿಂದೇಗೌಡ, ಪಿ.ಎಸ್.ಐ., ನರಸಿಂಹರಾಜು ಠಾಣೆ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯನ್ನು ರದ್ದುಪಡಿಸಿ ಇವರ ವೇತನವನ್ನು ಸಕ್ರಿಯಗೊಳಿಸಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ:ಪಿಎಸ್‌ಸಿ 166 ಸಿಎನ್‌ಎಸ್ 2007 ದಿ:02–04–2008 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 880

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಕೆ.ಎನ್. ಅಯ್ಯಂಗಾರ್, ಪಿ.ಐ., ಸಂಚಾರಿ ಪೊಲೀಸ್ ಠಾಣೆ, ಬೀದರ್ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಇವರ ಆದೇಶ ಸಂಖ್ಯೆ: ಸಿಬ್ಬಂದಿ: 4: ಲಕಿ: 79: 2006 ಪತ್ರ ಸಂಖ್ಯೆ: 521: 07 ದಿನಾಂಕ:03–01–2007.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು 73: ಈವ: 07 ಪತ್ರ ಸಂಖ್ಯೆ: 582: ಈವ:07 ದಿನಾಂಕ: 01–10–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24–02–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ: (8)90: 2007–08 ದಿನಾಂಕ: 08–03–2008

**ಪ್ರಸ್ತಾವನೆ:**

ಶ್ರೀ ಎನ್.ಕೆ.ಎನ್. ಅಯ್ಯಂಗಾರ್, ಪಿ.ಐ., ಸಂಚಾರಿ ಪೊಲೀಸ್ ಠಾಣೆ, ಬೀದರ್ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ವಿಭಾಗೀಯ ಸಂಚಾಲಕರು, ಕೇಂದ್ರ ಕಛೇರಿ ಬೆಂಗಳೂರು, ವಿಭಾಗೀಯ ಕಛೇರಿ ಗುಲಬರ್ಗಾ ರವರ ಪತ್ರದಲ್ಲಿ ಮಾನ್ಯ ಮುಖ್ಯಮಂತ್ರಿ ಕರ್ನಾಟಕ ಸರ್ಕಾರ ಬೆಂಗಳೂರು ಪತ್ರ ಕಳುಹಿಸಿ ಸದರಿ ಪತ್ರದಲ್ಲಿ "ಖಾಸಗಿ ಬಸ್ ಮಾಲೀಕರು ನೂರಾರು ಬಸ್‌ಗಳ ಕಾಂಟ್ರ್ಯಾಕ್ಟ್ ಕ್ಯಾರಿಯರ್ಸ್ ಪರಮಿಟ್ ಪಡೆದು ಸ್ಟೇಜ್ ಕ್ಯಾರಿಯರ್ ಆಗಿ ಓಡಿಸುವುದರಿಂದ ಸಾರಿಗೆ ಸಂಸ್ಥೆಗೆ ವರ್ಷಕ್ಕೆ ಸುಮಾರು 25 ಕೋಟಿ ರೂ. ನಷ್ಟವಾಗುತ್ತಿದ್ದರೂ, ಸಂಬಂಧಪಟ್ಟ ಅಧಿಕಾರಿಗಳು ಅದರಲ್ಲಿ ವಿಶೇಷವಾಗಿ ಆರ್.ಟಿ.ಓ., ಪೊಲೀಸ್ ಅಧಿಕಾರಿಗಳು ಹಾಗೂ ಟ್ರಾಫಿಕ್ ಪೊಲೀಸರು ಖಾಸಗಿ ವಾಹನಗಳ ಮಾಲೀಕರಿಂದ ಪ್ರತಿ ತಿಂಗಳು ಸುಮಾರು 10ಲಕ್ಷ ರೂ. ಗಳಷ್ಟು ಲಂಚ (ಮಾಮೂಲು) ಪಡೆದು ಕಣ್ಣು ಮುಚ್ಚಿ ಕುಳಿತು ಸಾರಿಗೆ ಸಂಸ್ಥೆಗೆ ಅಪಾರ ನಷ್ಟಕ್ಕೆ ಕಾರಣವಾಗುತ್ತಿದ್ದಾರೆ" ಎಂದು ಆಪಾದಿಸಿರುವರು, ಇದರಿಂದಾಗಿ ನೀವು ಇಲ್ಲಿಯವರೆಗೆ ಮೇಲೆ ತಿಳಿಸಿದ ಖಾಸಗಿ ಬಸ್ ಮಾಲೀಕರ ಹಾಗೂ ಚಾಲಕರ ವಿರುದ್ಧ ಸ್ಟೇಜ್ ಕ್ಯಾರಿಯರ್ ಆಗಿ ಓಡಿಸುತ್ತಿದ್ದವರ ವಿರುದ್ಧ ಆಯ್.ಎಂ.ವಿ. ಆಕ್ಟ್ ಅಡಿಯಲ್ಲಿ ಒಂದೂ ಪ್ರಕರಣ ದಾಖಲಿಸಿಲ್ಲ ಎಂದು ಖಚಿತಪಡುತ್ತದೆ, ಇಂತಹ ವಾಹನಗಳ ಕ್ಯಾರಿಯರ್ ವಾಹನಗಳ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸಿ ಅದನ್ನು ಹತೋಟಿಗೆ ತರಲು ವಿಫಲರಾಗಿ ವಿಧಿಸಿದ ಕರ್ತವ್ಯದಲ್ಲಿ ಸಡಿಲುತನ ಧೋರಣೆ ತಾಳಿ ಈ ಆರೋಪಕ್ಕೆ ಭಾಗಿಯಾಗಿ ತಪ್ಪಿತಸ್ಥರೆಂದು ಪರಿಗಣಿಸಿ ನೀಡಿದ ನಿರ್ದೇಶನ ಪರಿಪಾಲಿಸದೇ ಕರ್ತವ್ಯ ನಿರ್ಲಕ್ಷ್ಯ, ಬೇಜವಾಬ್ದಾರಿ ಪ್ರದರ್ಶಿಸಿ ಖಂಡನೀಯ ದುರ್ನಡತೆ ಎಸಗಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೀದರ್ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 3–01–2007ರ ಆದೇಶದಲ್ಲಿ ಅರ್ಜಿದಾರರರಿಗೆ ಮುಂಬರುವ ಒಂದು ವಾರ್ಷಿಕ ವೇತನ ಭತ್ಯೆ ಭವಿಷ್ಯ ವೇತನ ಭತ್ಯೆಗೆ ಪರಿಣಾಮ ಬೀರದಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 1–10–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಪೊಲೀಸ್ ಇನ್ಸ್‌ಪೆಕ್ಟರ್ ಹುದ್ದೆಯಲ್ಲಿದ್ದು, ಸಾರಿಗೆ ನಿಯಮ ಉಲ್ಲಂಘಿಸಿದರ ಮೇಲೆ ಕ್ರಮ ಜರುಗಿಸಲು ಅವರಿಗೆ ಸಂಪೂರ್ಣ ಅಧಿಕಾರವಿದೆ. ಈ ಜವಾಬ್ದಾರಿಯನ್ನು ನಿರ್ವಹಿಸುವಲ್ಲಿ ಇವರು ವಿಫಲರಾಗಿರುತ್ತಾರೆ. ರಸ್ತೆ ಸಂಚಾರಿ ನಿಯಮಗಳ ಉಲ್ಲಂಘನೆಗಾಗಿ ಸಾಕಷ್ಟು ಪ್ರಕರಣಗಳನ್ನು ದಾಖಲು ಮಾಡಿರಬಹುದು, ಆದರೆ ಇವರು ಪರ್ಮಿಟ್ ಕಂಡಿಷನ್‌ಗಳ ಉಲ್ಲಂಘನೆ ಬಗ್ಗೆ ಪ್ರಕರಣ ದಾಖಲಿಸಿಕೊಂಡ ಬಗ್ಗೆ ತಿಳಿಸಿರುವುದಿಲ್ಲ ಈ ಆಪಾದನೆ ಮೇಲೆಯೇ ಇವರಿಗೆ ಶಿಕ್ಷೆ ವಿಧಿಸಿದ್ದು, ಇದನ್ನು ಪುನರ್ ಪರಿಶೀಲಿಸಲು ಧೃಡ ಪಡಿಸುವ ದಾಖಲೆಗಳನ್ನು ನೀಡಿರುವುದಿಲ್ಲ, ಆದ್ದರಿಂದ ಪರಿಷ್ಕರಣ ಮೇಲ್ಮನವಿಯನ್ನು ತಿರಸ್ಕರಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 108 ಪೊಸಿಅ 2008 ಬೆಂಗಳೂರು, ದಿನಾಂಕ: 15ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎನ್.ಕೆ.ಎನ್. ಅಯ್ಯಂಗಾರ್, ಪಿ.ಐ., ಸಂಚಾರಿ ಪೊಲೀಸ್ ಠಾಣೆ, ಬೀದರ್, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 881

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಜಯವಂತ್ ರಾವ್, ಪಿ.ಎಸ್.ಐ., ಯಾಪಲದಿನ್ನಿ, ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿ, ರಾಯಚೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ: (3)PR: 47:06 O.B. No.3082: 06 ದಿನಾಂಕ: 12–07–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: ಅಪೀಲು 106: ಈವ: 06, ಅಪೀಲು 274: ಈವ: 07 ದಿನಾಂಕ: 5–04–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–10–07.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು ಸಂ(2)97: 07–08 ದಿನಾಂಕ: 17–01–08.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 275:CNS 2007 ದಿನಾಂಕ: 2–04–2008.

**ಪ್ರಸ್ತಾವನೆ:**

ಶ್ರೀ ಜಯವಂತ್ ರಾವ್, ಪಿ.ಎಸ್.ಐ., ಯಾಪಲದಿನ್ನಿ, ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಜಯವಂತ್ ರಾವ್, ಪಿ.ಎಸ್.ಐ., ಯಾಪಲದಿನ್ನಿ, ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, (ಹಾಲಿ ಬಸವಕಲ್ಯಾಣ ಟೌನ್ ಪೊಲೀಸ್ ಠಾಣೆ, ಬೀದರ್ ಜಿಲ್ಲೆ) ಕರ್ತವ್ಯ ನಿರ್ವಹಿಸುತ್ತಿದ್ದಾಗ ನಿಮ್ಮನ್ನು ರಾತ್ರಿ ಗಸ್ತು ಕರ್ತವ್ಯಕ್ಕೆ ನೇಮಕ ಮಾಡಿದಾಗ ರಾತ್ರಿ 9.00 ಗಂಟೆಯಿಂದ ಬೆಳಗಿನ ಜಾವ 5.00 ಗಂಟೆಯವರೆಗೆ ನಿಮಗೆ ನೇಮಕ ಮಾಡಿದ ಏರಿಯಾದಲ್ಲಿ ಗಸ್ತು ಮೇಲ್ವಿಚಾರಣೆ ಕರ್ತವ್ಯ ಮಾಡುವುದು ನಿಮ್ಮ ಆದ್ಯ ಕರ್ತವ್ಯ. ಆದರೆ ನೀವು ದಿ: 17–03–2006 ರಂದು ಸೇಕ್ಟರ್ ನಂ.6ರಲ್ಲಿ ರಾತ್ರಿ ಗಸ್ತು ಚೆಕ್ಕಿಂಗ್ ಕರ್ತವ್ಯವನ್ನು ಶ್ರದ್ದೆಯಿಂದ ಹಾಗೂ ಪ್ರಮಾಣಿಕವಾಗಿ ನಿರ್ವಹಿಸದೆ ಇರುವುದು ಕಂಡು ಬಂದಿರುತ್ತದೆ. ಆ ದಿವಸ ಯರಮರಸ ಕ್ಯಾಂಪ್‌ನಲ್ಲಿ ಎರಡು ರಾತ್ರಿ ಕನ್ನಾ ಕಳುವಿನ ಪ್ರಕರಣಗಳು ವರದಿಯಾಗಿದ್ದು ನಿಮ್ಮ ಈ ಬೇಜವಾಬ್ದಾರಿತನ ಮತ್ತು ಕರ್ತವ್ಯ ಲೋಪದಿಂದಾಗಿ ಈ ಘಟನೆಗೆ ಕಾರಣರಾಗಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿ, ರಾಯಚೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 12–07–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಯಾಗದಂತೆ 2 ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿ ಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05–04–2007ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಿ: 17–03–2006 ರಂದು ಚೆಕ್ಕಿಂಗ್ ಕರ್ತವ್ಯ ನಿರ್ವಹಿಸುತ್ತಿದ್ದಾಗ 2 ಕಳುವಿನ ಪ್ರಕರಣಗಳು ಘಟಿಸಿದ್ದು, ಕಂಡು ಬರುತ್ತದೆ. ವೈರ್‌ಲೆಸ್ ಉಪಕರಣ ಕೆಟ್ಟುಹೋಗಿದೆ ಎನ್ನುವ ಅರ್ಜಿದಾರರ ವಾದವನ್ನು ನಂಬಲಾಗುವುದಿಲ್ಲ. ಅವರಿಗೆ ನೀಡಿರುವ ವಾಕಿ–ಟಾಕಿಯನ್ನು ಸುಸ್ಥಿತಿಯಲ್ಲಿಟ್ಟುಕೊಂಡು ಚಾರ್ಜ್ ಮಾಡಿಟ್ಟುಕೊಳ್ಳುವುದು ಅವರ ಕರ್ತವ್ಯವಾಗಿರುತ್ತದೆ. ಆದರೆ ಈ ದೋಷಕ್ಕೆ ಇವರ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳವರೆಗೆ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಮುಂದೂಡಿರುವುದು ದೊಡ್ಡ ಪ್ರಮಾಣದ ಶಿಕ್ಷೆಯಾಗಿರುತ್ತದೆ. ಆದ್ದರಿಂದ ಇದನ್ನು ಭಾಗಶಃ ಮಾರ್ಪಡಿಸಿ, ಇವರ ಒಂದು ವಾರ್ಷಿಕ ವೇತನವನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 46 ಪೊಸಿಅ 2008 ಬೆಂಗಳೂರು, ದಿನಾಂಕ: 16ನೇ ಮೇ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಯವಂತ್ ರಾವ್, ಪಿ.ಎಸ್.ಐ., ಯಾಪಲದಿನ್ನಿ, ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಈ ಕೆಳಕಂಡಂತೆ ಪುರಸ್ಕರಿಸಿ ಆದೇಶಿಸಿದೆ.

ನೌಕರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲು ಆದೇಶಿಸಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರದ ಸಂಖ್ಯೆ: ಪಿಎಸ್‌ಸಿ 275 ಸಿಎನ್‌ಎಸ್ 2007 ದಿ: 2–04–2008

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 885

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ವೈ. ಹರಕೇರಿ, ಮಾಜಿ ಪೇದೆ (ಚಾಲಕ) ಸಂಖ್ಯೆ: 373, ಕೆ.ಎಸ್.ಆರ್.ಪಿ. ಬೆಳಗಾವಿ ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಕುರಿತು.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ ಕೆ.ಎಸ್.ಆರ್.ಪಿ., ಬೆಳಗಾವಿ ಇವರ ಆದೇಶ ಸಂಖ್ಯೆ: ಸಿಬ್ಬಂದಿ–3ಡಿಇ/86/2005–06 ದಿನಾಂಕ: 06–04–2006.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ & ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು/4/ 2006–07 ದಿನಾಂಕ: 05–09–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–10–2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ ಅಪೀಲು/9/130/ 2006–07 ದಿನಾಂಕ: 26–03–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 177 CNS 07 ದಿನಾಂಕ: 14–12–2007

**ಪ್ರಸ್ತಾವನೆ:**

ಶ್ರೀ ಎಸ್.ವೈ. ಹರಕೇರಿ, ಮಾಜಿ ಪೇದೆ (ಚಾಲಕ) ಸಂಖ್ಯೆ: 373, ಕೆ.ಎಸ್.ಆರ್.ಪಿ., ಬೆಳಗಾವಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**

1. ಆಪಾದಿತ ಪೊಲೀಸ್ ಅಧಿಕಾರಿ ಪೇದೆ (ಚಾಲಕ) ಸಂಖ್ಯೆ: 373, ಎಸ್.ವೈ. ಹರಕೇರಿ, ವಾಹನ ಸಾರಿಗೆ ವಿಭಾಗ ಇವರು 2ನೇ ಪಡೆ, ಕೆ.ಎಸ್.ಆರ್.ಪಿ., ಮಚ್ಚೆ–ಬೆಳಗಾವಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸದರಿಯವರು ಈ ಹಿಂದೆ ಲೋಕಮಾನ್ಯ ಕೋ–ಆಪ್ ಕ್ರೆಡಿಟ್ ಸೊಸೈಟಿ ಲಿಮಿಟೆಡ್, ಖಾನಾಪುರದಲ್ಲಿ ಸಾಲ ಪಡೆಯುವ ಕುರಿತು ಸುಳ್ಳು ವೇತನ ಪ್ರಮಾಣ ಪತ್ರವನ್ನು ಸದರಿ ಸೊಸೈಟಿಗೆ ಹಾಜರುಪಡಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿರುತ್ತೀರಿ.
2. ಸದರಿ ಸೊಸೈಟಿಗೆ ನೀವು ಹಾಜರುಪಡಿಸಿದ ವೇತನ ಪ್ರಮಾಣ ಪತ್ರದಲ್ಲಿ ನೀವು ಪೊಲೀಸ್ ಪೇದೆಯಾಗಿದ್ದರೂ ಸಹ ಹವಾಲ್ದಾರ್ ಸಂಖ್ಯೆ: 63 ಅಂತ ಸುಳ್ಳು ಮಾಹಿತಿ ನಮೂದಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುವಿರಿ.
3. ಸದರಿ ವೇತನ ಪ್ರಮಾಣ ಪತ್ರದಲ್ಲಿ ನಿಮ್ಮ ಮೂಲ ವೇತನವನ್ನು ರೂ. 5,200–00 ಅಂತ ನಮೂದಿಸಿ ಸದರಿ ಸೊಸೈಟಿಗೆ ಸುಳ್ಳು ಮಾಹಿತಿಯನ್ನು ನೀಡಿ ರೂ. 30,000–00 ಗಳ ಸಾಲ ಪಡೆದು ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಪ್ರದರ್ಶಿಸಿರುವಿರಿ.
4. ಸದರಿ ಸೊಸೈಟಿಗೆ ಪ್ರಮಾಣ ಪತ್ರದಲ್ಲಿ ಮತ್ತು ಸಾಲ ಮರುಪಾವತಿ ಕುರಿತು ಕಛೇರಿ ಮುಖ್ಯಾಧಿಕಾರಿಗಳು ನೀಡುವ (ಅಂಡರ್ ಟೇಕಿಂಗ್) ಪತ್ರದ ಮೇಲೆ ಹಾಕಿರುವ ಮೊಹರು (ಶೀಲು)ಗಳನ್ನು ನೀವೇ ನಿಮ್ಮ ಅನುಕೂಲಕ್ಕಾಗಿ ವಿವಿಧ ರೀತಿಯ ಮೂರು ಸೀಲುಗಳನ್ನು ತಯಾರಿಸಿ ಸದರಿ ಪತ್ರಗಳ ಮೇಲೆ ಮೊಹರು ಮತ್ತು ರುಜು ಹಾಕಿ ಸೊಸೈಟಿಗೆ ಸಲ್ಲಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ದುರ್ನಡತೆ ಎಸಗಿರುವಿರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 2ನೇ ಪಡೆ, ಕೆ.ಎಸ್.ಆರ್.ಪಿ., ಬೆಳಗಾವಿ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 06–04–2006 ರ ಆದೇಶದಲ್ಲಿ ಅರ್ಜಿದಾರರನ್ನು ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೈರೆಕ್ಟರ್ ಜನರಲ್ & ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 05–09–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಈ ದುರ್ನಡತೆ ಎಸಗುವವರೆಗೆ ಯಾವುದೇ ಗುರುತರ ಅಪರಾಧ ಎಸಗಿದಂತೆ ಅವರ ಸೇವಾ ಪುಸ್ತಕದಲ್ಲಿ ಕಂಡುಬರುತ್ತಿಲ್ಲ. ಇವರ ಸೇವೆಯನ್ನು ಪರಿಗಣಿಸಿ ಇವರಿಗೆ ಮದುವೆಯಾಗಿದ್ದು, ಕುಟುಂಬದ ಹಿತದೃಷ್ಟಿಯಿಂದ ಇದೊಂದು ಮಾನವೀಯತೆಯ ಪ್ರಕರಣವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ಆದೇಶವನ್ನು ರದ್ದುಪಡಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 14–12–2007ರ ಪತ್ರದಲ್ಲಿ ಸಹಮತಿ ನೀಡಿದೆ. ಅದರಂತೆ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 262 ಪೊಸಿಅ 2007 ಬೆಂಗಳೂರು, ದಿನಾಂಕ: 7ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ವೈ. ಹರಕೇರಿ ಮಾಜಿ ಪೇದೆ (ಚಾಲಕ) ಸಂಖ್ಯೆ: 373, ಕೆ.ಎಸ್.ಆರ್.ಪಿ., ಬೆಳಗಾವಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

1. ಶಿಸ್ತುಪ್ರಾಧಿಕಾರದ ಆದೇಶವನ್ನು ರದ್ದುಪಡಿಸಿ ಸದರಿಯವರನ್ನು ಸೇವೆಗೆ ಪುನರ್ ನೇಮಕ ಮಾಡುವುದು.
2. ಇವರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು.
3. ಇವರು ಸೇವೆಯಿಂದ ಹೊರಗುಳಿದ ಅವಧಿಯನ್ನು ಅವರ ವೇತನ ರಹಿತ ರಜೆಯೆಂದು ಪರಿಗಣಿಸುವುದು.
4. ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 5 ವರ್ಷಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮುಂದೂಡಲು ಆದೇಶಿಸಿದೆ.

ಈ ಆದೇಶವು ಶಿಸ್ತುಪ್ರಾಧಿಕಾರ ಆದೇಶ ಹೊರಡಿಸಿದ ದಿನಾಂಕದಿಂದಲೇ ಜಾರಿಗೆ ಬಂದಿರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ದಿ: PSC 177 CNS 07ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.91

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಕರೀಕಲ್, ಪಿ.ಎಸ್.ಐ, ತುರುವಿನಹಾಳ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಅವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಬಗ್ಗೆ.

**ಓದಲಾಗಿದೆ:**

1) ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್ ಗುಲಬರ್ಗಾ, ಇವರ ಆದೇಶ ಸಂಖ್ಯೆ: ಪಿಆರ್: 98:2005 ದಿನಾಂಕ: 12–10–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು/ 123/ಈವ/2005 ದಿನಾಂಕ: 20–03–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 14–06–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)77/2006–07 ದಿನಾಂಕ: 17–02–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 77 ಸಿಎನ್‌ಎಸ್ 2007 ದಿನಾಂಕ: 22–11–2007.

**ಪ್ರಸ್ತಾವನೆ:**

ಶ್ರೀ ಕರೀಕಲ್, ಪಿ.ಎಸ್.ಐ, ತುರುವಿನಹಾಳ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷಾರೋಪಣ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

ಮಳಖೇಡ ಠಾಣೆ ಗುನ್ನೆ ನಂ.58/2005, ಕಲಂ, 304(ಎ) ರಲ್ಲಿ ತನಿಖೆಯನ್ನು ಸರಿಯಾಗಿ ಮಾಡದೆ ಕರ್ತವ್ಯದಲ್ಲಿ ಬೇಜವಾಬ್ದಾರಿತನ ಹಾಗೂ ನಿರ್ಲಕ್ಷ್ಯತನ ತೋರಿಸಿದ್ದರ ಬಗ್ಗೆ.

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್ ಗುಲಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 12–10–2005ರ ಆದೇಶದಲ್ಲಿ ಅರ್ಜಿದಾರರರಿಗೆ ವಾರ್ಷಿಕ ವೇತನ ಮುಂಬಡ್ತಿಯನ್ನು ಆರು (06) ತಿಂಗಳ ಕಾಲ ಮುಂದಿನ ವಾರ್ಷಿಕ ಮುಂಬಡ್ತಿಯ ಮೇಲೆ ಪರಿಣಾಮ ಬೀರದಂತೆ ತಡೆಹಿಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಈಶಾನ್ಯ ವಲಯ ಗುಲ್ಬರ್ಗಾ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 20–03–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅಪಘಾತ ನಡೆದ ದಿನಾಂಕ: 3–07–2005, ಅಪಘಾತ ನಡೆದ ಅವಧಿಯಲ್ಲಿ ಸದರಿ ಪಿ.ಎಸ್.ಐ ಅವರು ಸ್ಪರ್ಧಾಳುವಾಗಿ ಬೆಂಗಳೂರಿನ 9ನೇ ಪಡೆ ಕೆ.ಎಸ್.ಆರ್.ಪಿ, ಬೆಂಗಳೂರು ಇವರ ಮುಂದೆ ವರದಿ ಮಾಡಿಕೊಂಡು, ಸ್ಪರ್ಧೆ ಮುಗಿಸಿ ದಿನಾಂಕ: 10–07–2005ರಂದು ಮುಂಜಾನೆ ಕೇಂದ್ರ ಸ್ಥಾನಕ್ಕೆ ಬಂದು ವರದಿ ಮಾಡಿಕೊಂಡಿರುತ್ತಾರೆ. ಈ ಅವಧಿಯಲ್ಲಿ ಠಾಣಾ ಪ್ರಭಾರದಲ್ಲಿದ್ದವರು ಅಪಘಾತವನ್ನು ದಾಖಲು ಮಾಡಬೇಕಿತ್ತು. ಆದುದರಿಂದ ಸದರಿಯವರ ಮೇಲೆ ದೋಷಾರೋಪಣ ಪತ್ರ ಹೊಡಿಸಿ ಶಿಕ್ಷೆ ವಿಧಿಸಿರುವುದು ಸಮಂಜಸವೆನಿಸುವುದಿಲ್ಲ. ಆದ್ದರಿಂದ ಶಿಸ್ತಿ ಪ್ರಾಧಿಕಾರ ಇವರಿಗೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಿ ವೇತನ ಬಡ್ತಿಯನ್ನು ಸಕ್ರಮಗೊಳಿಸಲು ಸರ್ಕಾರ ಉದ್ದೇಶಿಸಿ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ: 22–11–2007 ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ತನ್ನ ಸಹಮತಿಯನ್ನು ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 478 ಪೊಸಿಅ 2006 ಬೆಂಗಳೂರು, ದಿನಾಂಕ: 3ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕರೀಕಲ್, ಪಿ.ಎಸ್.ಐ, ತುರುವಿನಹಾಳ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯಾದ ವಾರ್ಷಿಕ ವೇತನ ಮುಂಬಡ್ತಿಯನ್ನು ಆರು (06) ತಿಂಗಳ ಕಾಲ ಮುಂದಿನ ವಾರ್ಷಿಕ ಮುಂಬಡ್ತಿಯ ಮೇಲೆ ಪರಿಣಾಮ ಬೀರದಂತೆ ತಡೆಹಿಡಿದ ದಂಡನೆಯನ್ನು ರದ್ದುಗೊಳಿಸಿ, ವಾರ್ಷಿಕ ವೇತನ ಬಡ್ತಿಯನ್ನು ಸಕ್ರಮಗೊಳಿಸಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಇದನ್ನು ಕರ್ನಾಟಕ ಲೋಕ ಸೇವಾ ಆಯೋಗದ ಆದೇಶ ಸಂಖ್ಯೆ: ಪಿಎಸ್‌ಸಿ 77 ಸಿಎನ್‌ಎಸ್ 2007 ದಿನಾಂಕ: 22–11–2007ರ ಅನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.92

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಡಿ. ನಾಗರಾಜ್, ಪೊಲೀಸ್ ಉಪ ನಿರೀಕ್ಷಕರು, ದೊಡ್ಡ ಬೆಳವಂಗಲ ಪೊಲೀಸ್ ಠಾಣೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ಇವರ ಆದೇಶ ಸಂಖ್ಯೆ: ಶಿಕ್ಷಾಪಟ್ಟಿ/55/ಉಜಿ/ 2005, ದಿನಾಂಕ: 5–9–2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/2/ಪ.ವ./2006 ದಿನಾಂಕ: 20–7–2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 18–4–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)4/2007–08 ದಿನಾಂಕ: 16–5–2007.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC 176 CNS 07 ದಿನಾಂಕ: 12–12–07

**ಪ್ರಸ್ತಾವನೆ:**

ಶ್ರೀ ಸಿ.ಡಿ. ನಾಗರಾಜ್, ಪೊಲೀಸ್ ಉಪ ನಿರೀಕ್ಷಕರು, ದೊಡ್ಡ ಬೆಳವಂಗಲ ಪೊಲೀಸ್ ಠಾಣೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಮಲ್ಪೆ ಪೊಲೀಸ್ ಠಾಣಾ ಅ.ಕ್ರ. 28/05 ಕಲಂ. 8, ಜೊತೆಗೆ 11 ಕರ್ನಾಟಕ ಗೋವಧೆ ಪ್ರತಿಬಂಧಕ ಕಾಯ್ದೆ ಜೊತೆಗೆ 34 ಐಪಿಸಿ.ಯ ಆರೋಪಿಗಳಾದ ಹಸನಬ್ಬ ಮತ್ತು ಹಾಜಬ್ಬರವರನ್ನು ದಿನಾಂಕ : 13–3–2005 ರಂದು ರಾತ್ರಿ 20–30 ಗಂಟೆಗೆ ಮಲ್ಪೆ ಠಾಣಾ ಅ.ಕ್ರ. 29/05 ರಲ್ಲಿನ ಆರೋಪಿಗಳು ಹಾಗೂ ಇತರ ಜನರು ಸೇರಿ ವಿವಸ್ತ್ರಗೊಳಿಸಿ ಹಲ್ಲೆ ನಡೆಸಿದ ಘಟನೆಯನ್ನು ಗರುಡ ಸಿಬ್ಬಂದಿಯವರು ನೋಡಿ ನಿಮಗೆ ತಿಳಿಸಿದರೂ ಹಲ್ಲೆ ಮಾಡಿದ ವ್ಯಕ್ತಿಗಳ ವಿರುದ್ಧ ತಕ್ಷಣ ಅಪರಾಧ ಪ್ರಕರಣ ದಾಖಲಿಸದೇ ಮತ್ತು ಕಾನೂನು ರೀತಿಯ ಕ್ರಮ ಕೈಗೊಳ್ಳದೇ ಕಾನೂನು ಸುವ್ಯವಸ್ಥೆಗೆ ಧಕ್ಕೆಯಾಗಲು ಕಾರಣಕರ್ತರಾಗಿ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ, ಉಡುಪಿ ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 5–9–2005ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪಶ್ಚಿಮ ವಲಯ, ಮಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20–7–2006ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಆರೋಪಕ್ಕೂ ಇವರಿಗೂ ಯಾವುದೇ ರೀತಿಯ ಸಂಬಂಧ ಇರುವುದಿಲ್ಲ. ಕಾರಣ ಈ ಪ್ರಕರಣವು ಮಲ್ಪೆ ಠಾಣಾ ವ್ಯಾಪ್ತಿಗೆ ಬಾರದೆ ಉಡುಪಿ ಠಾಣಾ ವ್ಯಾಪ್ತಿಗೆ ಸಂಬಂಧಿಸಿದೆ, ಮತ್ತು ಗರುಡ ಸಿಬ್ಬಂದಿ ಅರ್ಜಿದಾರರಿಗೆ ಮೌಖಿಕವಾಗಿ ತಿಳಿಸಿರುವುದಕ್ಕೆ ಸಹ ಆಧಾರವಿರುವುದಿಲ್ಲ, ಅರ್ಜಿದಾರರ ಠಾಣಾ ವ್ಯಾಪ್ತಿಗೆ ಈ ಪ್ರಕರಣ ಬರುವುದಿಲ್ಲದಿರುವುದರಿಂದ ಇವರ ಮೇಲೆ ವಿಚಾರಣೆ ಮಾಡಿ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆ ಹಿಡಿಯುವ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆ ವಿಧಸಲಾಗಿದೆ ಅರ್ಜಿದಾರರು ಶಿಸ್ತು ಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ಮೌಖಿಕ ಆದೇಶಗಳನ್ನು ಸಹ ಪಾಲಿಸುವುದು ಕರ್ತವ್ಯವಾಗಿದ್ದರೂ ಸಹ ವಿಧಿಸಿದ ಶಿಕ್ಷೆ ಪ್ರಮಾಣ ಹೆಚ್ಚಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರ ವಿಧಿಸಿರುವ ದಿನಾಂಕ: 5–09–2005ರಲ್ಲಿ ನೀಡಿರುವ ದಂಡಾನದೇಶವನ್ನು ಮಾರ್ಪಡಿಸಿ ಸದರಿಯವರಿಗೆ ಆರು ತಿಂಗಳ ಕಾಲ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಅನಮೋದನೆಯನ್ನು ಕೋರಲಾಗಿದ್ದು, ಆಯೋಗವು ದಿನಾಂಕಾ: 12–12–2007ರ ತನ್ನ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿದೆ. ಆದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 263 ಪೊಸಿಅ 2007 ಬೆಂಗಳೂರು ದಿನಾಂಕ: 3ನೇ ಜನವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಸಿ.ಡಿ.ನಾಗರಾಜ್, ಪೊಲೀಸ್ ಉಪ ನಿರೀಕ್ಷಕರು, ದೊಡ್ಡ ಬೆಳವಂಗಲ ಪೊಲೀಸ್ ಠಾಣೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯಾದ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು 2 ವರ್ಷಗಳ ಕಾಲ ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ತಡೆಹಿಡಿಯುವ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದ ಶಿಕ್ಷೆಯನ್ನು ರದ್ದುಗೊಳಿಸಿ ಆರು ತಿಂಗಳ ಕಾಲ ವಾರ್ಷಿಕ ವೇತನ ಬಡ್ತಿಯನ್ನು ತಡೆಹಿಡಿಯುವ ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಆದೇಶಿಸಿದೆ.

ಈ ಆದೇಶವು ಶಿಸ್ತು ಪ್ರಾಧಿಕಾರವು ಹೊರಡಿಸಿದ ಆದೇಶದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಇದನ್ನು ಕರ್ನಾಟಕ ಲೋಕ ಸೇವಾ ಆಯೋಗದ ಆದೇಶ ಸಂಖ್ಯೆ: ಪಿಎಸ್‌ಸಿ 176 ಸಿಎನ್‌ಎಸ್ 2007 ದಿನಾಂಕ: 12–12–2007ರ ಅನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 57

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀಮತಿ ನಿರ್ಮಲಾ ಹರೀಶ್, ಮ.ಪಿ.ಐ., ರೈಲ್ವೆ ಪೊಲೀಸ್ ವೃತ್ತ, ಮೈಸೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ/8/69 2005–06 ದಿ: 25–04–2007.
2) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29–05–2007.
3) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ/8/69/2005–06 ದಿನಾಂಕ:20–08–2007.

**ಪ್ರಸ್ತಾವನೆ:**

ಶ್ರೀಮತಿ ನಿರ್ಮಲಾ ಹರೀಶ್, ಮ.ಪಿ.ಐ., ರೈಲ್ವೆ ಪೊಲೀಸ್ ವೃತ್ತ, ಮೈಸೂರು, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

1) ದಿ: 28–12–2005 ರಂದು ಬೆಳಿಗ್ಗೆ 12–30ರಲ್ಲಿ ವಿಜಯನಗರ ಠಾಣೆಯ ಸಿಬ್ಬಂದಿಗಳೊಡನೆ ಶ್ರೀಮತಿ ಸಿ.ಎಂ. ವೇರಿಂಗ್ ಮತ್ತು ಡಿ.ಎ.ಆರ್. ಪೇದೆ ನಾಗರಾಜು ರವರುಗಳು ನಿಮ್ಮ ಮುಂದೆ ಹಾಜರಾದಾಗ ಶ್ರೀಮತಿ ಸಿ.ಎಂ. ವೇರಿಂಗ್ ರವರ ಮೇಲೆ ನಡೆದ ಅತ್ಯಾಚಾರ ಯತ್ನಕ್ಕೆ ಸಂಬಂಧಿಸಿದಂತೆ, ದೂರನ್ನು ಬರೆದುಕೊಂಡು ಪ್ರಕರಣ ದಾಖಲಿಸಿ ನಂತರ ಸಿ.ಎಂ. ವೇರಿಂಗ್ ರವರನ್ನು ವೈದ್ಯಕೀಯ ಪರೀಕ್ಷೆಗೆ ಕಳುಹಿಸದೆ ಪ್ರಕರಣ ದಾಖಲಿಸುವ ಮೊದಲೇ ವೈದ್ಯಕೀಯ ಪರೀಕ್ಷೆಗೆ ಕಳುಹಿಸಿ ಕರ್ತವ್ಯದಲ್ಲಿ ತೀವ್ರ ಲೋಪವೆಸಗಿ ನಿರ್ಲಕ್ಷ್ಯತನ ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿರುತ್ತೀರಿ.

2) ನೀವು ಆರೋಪಿ ನಾಗರಾಜು ರವರನ್ನು ವಿಚಾರಣೆ ಮಾಡಿದಾಗ ಆರೋಪಿಯು ಹೀನ ಕೃತ್ಯ ಮಾಡಿರುವ ಬಗ್ಗೆ ಒಪ್ಪಿಕೊಂಡರೂ ಸಹ ಪ್ರಕರಣವನ್ನು ಅದೇ ದಿನ ದಾಖಲು ಮಾಡದೆ ಫಿರ್ಯಾದಿದಾರರಾದ ಶ್ರೀಮತಿ.ಎಂ.ವೇರಿಂಗ್ ರವರು ವೈದ್ಯಕೀಯ ತಪಾಸಣೆಯಿಂದ ಬಂದ ನಂತರ ಈ ಪ್ರಕರಣದ ಫಿರ್ಯಾದನ್ನು ನೀವು ಕನ್ನಡದಲ್ಲಿ ಬರೆಯಿಸಿ ಶ್ರೀಮತಿ ಎಂ. ವೇರಿಂಗ್ ರವರಿಗೆ ಸಹಿ ಮಾಡಲು ಒತ್ತಾಯಿಸಿ ನಂತರ ಅದನ್ನು ಹರಿದು ಹಾಕಿ ಖಾಲಿ ಹಾಳೆಯ ಮೇಲೆ ಸಹಿ ಮಾಡಲು ಒತ್ತಾಯಿಸಿ ಪ್ರಕರಣವನ್ನು ಕೈಬಿಡುವಂತೆ ಆರೋಪಿಯನ್ನು ಕ್ಷಮಿಸುವಂತೆ ಆಕೆ ಒಪ್ಪದಿದ್ದಾಗ, ಆಕೆಯನ್ನು ಮರುದಿವಸ ಬರುವಂತೆ ಹಾಗೂ ಆರೋಪಿಯನ್ನು ಠಾಣೆಯಲ್ಲಿಯೇ ಇಟ್ಟುಕೊಳ್ಳುತ್ತೇನೆಂದು ಸುಳ್ಳು ಹೇಳಿ, ಆರೋಪಿ ತಲೆಮರೆಸಿಕೊಳ್ಳಲು ಪ್ರಚೋದನೆ ನೀಡಿ ಠಾಣೆಯಿಂದ ಬಿಡುಗಡೆ ಮಾಡಿ, ಕೃತ್ಯದ ಬಗ್ಗೆ ವೈದ್ಯಕೀಯ ಕುರುಹುಗಳು ಹಾಗೂ ದಾಖಲಾತಿ ಇದ್ದರೂ, ಆರೋಪಿ ತಪ್ಪನ್ನು ಒಪ್ಪಿಕೊಂಡರೂ ಪ್ರಕರಣ ಮುಚ್ಚಿಹಾಕಲು ಪ್ರಯತ್ನಿಸುವುದರ ಮೂಲಕ ಕರ್ತವ್ಯದಲ್ಲಿ ತೀವ್ರ ಲೋಪವೆಸಗಿ ನಿರ್ಲಕ್ಷ್ಯತನ, ಬೇಜವಾಬ್ದಾರಿತನ ಹಾಗೂ ದುರ್ನಡತೆ ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿ: 25–04–2007ರ ಆದೇಶದಲ್ಲಿ ಅರ್ಜಿದಾರರ ಮುಂಬರುವ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಆರು ತಿಂಗಳ ಕಾಲ ಮುಂದೂಡಿದ ಮತ್ತು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿರುವುದರಿಂದ ಹಾಗೂ ಅರ್ಜಿದಾರರು ತಮ್ಮ ಮೇಲಿನ ಆರೋಪಗಳನ್ನು ಅಲ್ಲಗಳೆಯುವಂತಹ ಯಾವುದೇ ದಾಖಲೆ ಒದಗಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 290 ಪೊಸಿಅ 2007 ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀಮತಿ ನಿರ್ಮಲಾ ಹರೀಶ್, ಮ.ಪಿ.ಐ., ರೈಲ್ವೆ ಪೊಲೀಸ್ ವೃತ್ತ, ಮೈಸೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 755

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿ.ಐ. ಮುತ್ತಣ್ಣ, ಎ.ಪಿ.ಸಿ–187, ಡಿ.ಎ.ಆರ್, ಕೊಡಗು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1) ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಕಛೇರಿ, ಕೊಡಗು ಜಿಲ್ಲೆ, ಕೊಡಗು ಇವರ ಆದೇಶ ಸಂಖ್ಯೆ: ಡಿಇ/2/2005 ದಿನಾಂಕ: 25–07–2006.
2) ಮೇಲ್ಮನವಿ ಪ್ರಾಧಿಕಾರಿ ಮತ್ತು ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರ ಆದೇಶ ಸಂಖ್ಯೆ: ಅಪೀಲು/09/2006–07 ದಿನಾಂಕ: 6–02–2007.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 16–05–2007.

4) ಮಹಾ ನಿರ್ದೇಶಕರು ಮತ್ತು ಪೊಲೀಸ್ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)/23/2007–08 ದಿನಾಂಕ: 3–01–2008.

**ಪ್ರಸ್ತಾವನೆ:**

ಶ್ರೀ ಸಿ.ಐ. ಮುತ್ತಣ್ಣ, ಎ.ಪಿ.ಸಿ–187, ಡಿ.ಎ.ಆರ್, ಕೊಡಗು ಜಿಲ್ಲೆ ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಸಿ.ಐ. ಮುತ್ತಣ್ಣ, ಎ.ಪಿ.ಸಿ–187, ಡಿ.ಎ.ಆರ್, ಕೊಡಗು ಜಿಲ್ಲೆ ಇವರು ಕುಮಾರಿ ಹೆಚ್.ಆರ್. ವೇದಾವತಿರವರು ದಿನಾಂಕ: 29–12–2004 ರಂದು ಬೆಳಿಗ್ಗೆ 10 ಘಂಟೆಗೆ ಸ್ನೇಹಿತೆಯೊಂದಿಗೆ ಕಾಲೇಜಿಗೆ ಹೋಗುವ ಸಮಯದಲ್ಲಿ ಆಟೋದಲ್ಲಿ ಬಂದು ತನ್ನನ್ನು ಕೂರಿಸಿಕೊಂಡು ವಿರಾಜಪೇಟೆ ನಗರದ ಮೀನುಪೇಟೆಯಲ್ಲಿರುವ ಕೀರ್ತಿ ಲಾಡ್ಜಿಗೆ ಕರೆದುಕೊಂಡು ಹೋಗಿ ಬಲತ್ಕಾರವಾಗಿ ಸಂಭೋಗ ಮಾಡಿದ್ದು ನಂತರ ವಿಷಯವನ್ನು ಬೇರೆ ಯಾರಿಗೂ ಹೇಳಬೇಡ ಹೇಳಿದ್ದಲ್ಲಿ ನಿನ್ನನ್ನು ಕೊಲೆ ಮಾಡುತ್ತೇನೆ ಎಂದು ಬೆದರಿಸಿರುತ್ತಾನೆ. ಈ ಬಗ್ಗೆ ದೂರು ಅರ್ಜಿಯನ್ನು ಕುಮಾರಿ ಹೆಚ್.ಆರ್.ವೇದಾವತಿ ದಿನಾಂಕ: 3–01–2005 ರಂದು ದಾಖಲಿಸಿದ ಮೇಲೆ ವಿರಾಜಪೇಟೆ ನಗರ ಠಾಣೆಯಲ್ಲಿ ಮೊಕ್ಕದ್ದಮೆ ಸಂ.17/2005 ಕಲಂ 420, 378, 508, ಐಪಿಸಿ ಮತ್ತು 3(2)(5) ಎಸ್‌ಸಿ/ಎಸ್‌ಟಿ ಆಕ್ಟ್ 1989 ಪ್ರಕಾರ ಕೇಸು ದಾಖಲು ಮಾಡಿರುತ್ತಾರೆ. ಆ.ಪೊ.ಅ ಕರ್ತವ್ಯದಲ್ಲಿ ಘೋರ ದುರ್ನಡತೆ ಮತ್ತು ಅತೀವ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ ಎಂದು ಆರೋಪ ಹೊರಿಸಲಾಗಿದೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ವರದಿ ಸಲ್ಲಿಸಿರುತ್ತಾರೆ. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಕಛೇರಿ, ಕೊಡಗು ಜಿಲ್ಲೆ ಮಡಕೇರಿ ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:25–07–2006ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತಿಗೊಳಿಸಿ ಇವರ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿದಾರರ ಅರ್ಜಿಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಪರಿಗಣಿಸುವಂತಹ ಯಾವುದೇ ಅಂಶಗಳು ಕಂಡುಬಾರದೇ ಇರುವುದರಿಂದ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 6–02–2007 ರಲ್ಲಿ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿರುತ್ತಾರೆ.

ಈ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿ ಪೂರ್ವಭಾವಿ ವಿಚಾರಣೆ ನಡೆಸಿದ ನಂತರ ಇಲಾಖಾ ವಿಚಾರಣೆಯನ್ನು ನಿಯಮಗಳ ಪ್ರಕಾರ ನಡೆಸಿ ಮೇಲ್ಮನವಿದಾರರಿಗೆ ಶಿಕ್ಷೆ ವಿಧಿಸಿರುವುದಾಗಿದೆ. ಮತ್ತು ಇಲಾಖಾ ವಿಚಾರಣೆಯನ್ನು ನಡೆಸಿರುವ ಡಿಎಸ್‌ಪಿ ವಿರಾಜಪೇಟೆ ರವರು ದಾಖಲೆಗೆ ಸಂಬಂಧಿಸಿದ ಸಾಕ್ಷಿಯಾಗಿದ್ದು ಸದರಿಯವರನ್ನು ಇಲಾಖಾ ವಿಚಾರಣೆ ಸಮಯದಲ್ಲಿ ಸಾಕ್ಷಿಯಾಗಿ ಪರಿಗಣಿಸಿರುವುದಿಲ್ಲ. ಈ ಪ್ರಕರಣದಲ್ಲಿ ಕು.ಹೆಚ್.ಸಿ.ವೇದಾವತಿ ತಮ್ಮ ಭವಿಷ್ಯದ ಬಗ್ಗೆ ಚಿಂತಿಸದೇ ದೂರನ್ನು ನೀಡಿದ್ದು ದಿ:29–12–04 ರಂದು ಆಟೋದಲ್ಲಿ ಕೀರ್ತಿ ಲಾಡ್ಜ್‌ಗೆ ಕರೆದುಕೊಂಡು ಹೋದ ಬಗ್ಗೆ ಹಾಗೂ ಲಾಡ್ಜ್‌ನ ರೂಂ.ನಂ 101 ಎಂದೇ ಸ್ಪಷ್ಟವಾಗಿ ಹೇಳಿರುವುದಲ್ಲದೇ ಆ.ಪೊ.ಅ ರವರಿಗೆ ಮೊದಲಿನಿಂದಲೇ ವೇದಾವತಿಯವರ ಪರಿಚಯವಿದ್ದು, ಮನೆಗೆ ಹೋಗಿ ಬಂದು ಆತ್ಮೀಯತೆಯಿಂದ ಇದ್ದು, ಕಾಲೇಜಿನ ಬಳಿ ಹೋಗಿ ಮಾತನಾಡಿರುವುದನ್ನು ಗೆಳತಿಯರೆಲ್ಲರೂ ನೋಡಿದ್ದು, ಇವೆಲ್ಲಾ ಸಾಕ್ಷಿ ಸೃಷ್ಠಿ ಮಾಡಲು ಸಾಧ್ಯವಿಲ್ಲ. ಅಥವಾ ಸುಳ್ಳು ಹೇಳಿಕೆಯನ್ನು ನೀಡಲು ಬರುವುದಿಲ್ಲ. ಅಲ್ಲದೇ ಆ ದಿನ ಲಾಡ್ಜ್‌ನಲ್ಲಿದ್ದ ಲೋಕೇಶ್ ಹಾಗೂ ಹರೀಶ ರವರು ಘಟನೆ ನಡೆದ ದಿನ ವೇದಾವತಿಯ ಪಿಂಕ್ ಕಲರ್‌ನ ಚೂಡಿದಾರ್ ಉಟ್ಟ ಬಗ್ಗೆ ಹಾಗೂ ಡಿಎಸ್‌ಪಿ ವಿರಾಜಪೇಟೆ ಇವರ ಕಛೇರಿಯಲ್ಲಿ ಇದೇ ಹುಡುಗಿ ಲಾಡ್ಜ್‌ಗೆ ಬಂದಿದ್ದಳು ಎಂದು ಹೇಳಿ ನಂತರ ಇಲಾಖಾ ವಿಚಾರಣೆಯಲ್ಲಿ ತಿರುಚಿ ಹೇಳಿರುವುದು ಸಂಶಯವನ್ನುಂಟು ಮಾಡಿರುತ್ತದೆ. ಅಲ್ಲದೇ ಮೇಲ್ಮನವಿದಾರರಿಗೆ ಒಂದೇ ಪ್ರಕರಣದಲ್ಲಿ ಎರಡು ಶಿಕ್ಷೆ ನೀಡಲಾಗಿದೆ ಎಂದು ಹೇಳಿರುವುದು ಸತ್ಯಕ್ಕೆ ದೂರವಾದ ವಿಷಯವಾಗಿದ್ದು, ಮೊದಲ ದೂರು ಮೇಲ್ಮನವಿದಾರರ ತನ್ನ ಮಗಳಿಗೆ ಕಿರುಕುಳ ನೀಡುತ್ತಿದ್ದ ಕಾರಣಕ್ಕೆ ತಾಯಿ ನೀಡಿರುವುದಾಗಿದೆ. ನಂತರ ತನ್ನನ್ನು ಮದುವೆಯಾಗುವುದಾಗಿ ನಂಬಿಸಿ ಅಕ್ರಮ ಸಂಭೋಗ ಮಾಡಿ ಕೆಲ ದಿನ ಕಳೆದ ನಂತರ ಮದುವೆಯಾಗುವುದಿಲ್ಲವೆಂದು ಮೇಲ್ಮನವಿದಾರರ ಬೆದರಿಕೆ ಹಾಕಿದ್ದರಿಂದ ಕು. ಹೆಚ್.ಆರ್. ವೇದಾವತಿ ರವರು ದೂರು ನೀಡಿರುವುದಾಗಿದೆ. ಅರ್ಜಿದಾರರು ಸರ್ಕಾರದ ದಿಕ್ಕು ತಪ್ಪಿಸಲು ಈ ರೀತಿ ಆಪಾದನೆ ಮಾಡಿರುವುದು ಕಂಡು ಬರುತ್ತದೆ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಕಂಡು ಬರುವುದಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 318 ಪೊಸಿಅ 2007, ಬೆಂಗಳೂರು ದಿ: 13ನೇ ಫೆಬ್ರವರಿ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಐ. ಮುತ್ತಣ್ಣ, ಎ.ಪಿ.ಸಿ–187, ಡಿ.ಎ.ಆರ್, ಕೊಡಗು ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣಾ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 345

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಾಲಕೃಷ್ಣಯ್ಯ, ಎಪಿಸಿ–148, ಡಿ.ಎ.ಆರ್. ಚನ್ನಪಟ್ಟಣರವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಬೆಂಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(4)ಶಿಕ್ಷೆ/ಡಿಇ: 2:2000–01 ದಿನಾಂಕ: 29–07–2002.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು 37/2002–03 ದಿನಾಂಕ: 29–01–2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 5–11–2007.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)103/2007–08 ದಿನಾಂಕ: 26–02–2008

**ಪ್ರಸ್ತಾವನೆ:**

ಶ್ರೀ ಬಾಲಕೃಷ್ಣಯ್ಯ, ಎಪಿಸಿ–148, ಡಿ.ಎ.ಆರ್. ಚನ್ನಪಟ್ಟಣ, ರಾಮನಗರ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965/89 ರ ನಿಯಮ 6 & 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಶ್ರೀ ಬಾಲಕೃಷ್ಣಯ್ಯ, ಎಪಿಸಿ–148, ಡಿ.ಎ.ಆರ್. ಚನ್ನಪಟ್ಟಣ, ರಾಮನಗರ ಜಿಲ್ಲೆ, ಇವರು ಮತ್ತು ಎಪಿಸಿ–161 ರೇವಣ್ಣಸಿದ್ದಪ್ಪ ರವರನ್ನು ದಿ: 3–04–2001 ವಿಚಾರಣಾಧೀನ ಖೈದಿಗಳ ಬೆಂಗಾವಲು ಕರ್ತವ್ಯಕ್ಕೆ ರಾಮನಗರ ಉಪ ಕಾರಾಗೃಹದಿಂದ ಚನ್ನಪಟ್ಟಣ ಮಾನ್ಯ ಎಂ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹಾಜರು ಪಡಿಸಲು ಬೆಂಗಾವಲು ಕರ್ತವ್ಯಕ್ಕೆ ನೇಮಕ ಮಾಡಿದ್ದು, ಅದರಂತೆ, ನೀವು ಆರೋಪಿ ಸೈಯದ್ ಸಾದಿಕ್ ಮತ್ತು ರಾಮಸ್ವಾಮಿ ಎಂಬುವವರನ್ನು ರಾಮನಗರ ಉಪ ಕಾರಾಗೃಹದಿಂದ ಕರೆದುಕೊಂಡು ಬಂದು ಚನ್ನಪಟ್ಟಣ ನ್ಯಾಯಾಲಯಕ್ಕೆ ಹಾಜರು ಪಡಿಸಿದ್ದು, ನಂತರ ನಿಮ್ಮ ಬೆಂಗಾವಲಿನಲ್ಲಿದ್ದಾಗಲೇ ಆರೋಪಿತರಲ್ಲಿ ಒಬ್ಬರಾದ ಸೈಯದ್ ಸಾಧಿಕ್ ಎಂಬುವರು ಮಧ್ಯಾಹ್ನ ಸುಮಾರು 1 ಗಂಟೆಯಲ್ಲಿ ಚನ್ನಪಟ್ಟಣ ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯದ ಆವರಣದಿಂದ ತಪ್ಪಿಸಿಕೊಂಡು ಹೋಗಲು ಅವಕಾಶ ಮಾಡಿಕೊಟ್ಟಿರುವುದರ ಮೂಲಕ ತಮ್ಮ ಕರ್ತವ್ಯದಲ್ಲಿ ಬೇಜವಾಬ್ದಾರಿತನ, ಉದಾಸೀನತೆ ಮತ್ತು ನಿರ್ಲಕ್ಷ್ಯತೆ ಪ್ರದರ್ಶಿಸಿರುತ್ತಾರೆ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಸೂಪರಿಂಟೆಂಡೆಂಟ್, ಬೆಂಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29–7–2002ರ ಆದೇಶದಲ್ಲಿ ಅರ್ಜಿದಾರರ ಎರಡು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಧಕ್ಕೆಯಾಗುವಂತೆ ಆದೇಶಿಸಿ ಎರಡು ವರ್ಷಗಳ ಕಾಲ ಮುಂದೂಡಿದೆ ಮತ್ತು ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದು ಪರಿಗಣಿಸಿದೆ ಹಾಗೂ ಶ್ರೀ ರೇವಣಸಿದ್ದಪ್ಪ, ಎಪಿಸಿ 161 ರವರನ್ನು ದೋಷಮುಕ್ತರನ್ನಾಗಿಸಿದೆ ಇವರ ಅಮಾನತ್ತಿನಲ್ಲಿದ್ದ ಅವಧಿ ದಿ: 8–4–2001 ರಿಂದ 28–5–2001 ರವರೆಗೆ ಕರ್ತವ್ಯವೆಂದು ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 29–1–2003ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಸದರಿ ಪ್ರಕರಣದಲ್ಲಿ ದೃಢಪಡುವಂತಹ ಯಾವುದೇ ಪುರಾವೆಗಳು ಕಂಡು ಬಂದಿರುವುದಿಲ್ಲ.

ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯಕ್ಕೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 71 ಪೊಸಿಅ 2008 ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬಾಲಕೃಷ್ಣಯ್ಯ, ಎಪಿಸಿ–148, ಡಿ.ಎ.ಆರ್. ಚನ್ನಪಟ್ಟಣ, ರಾಮನಗರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 576

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** 2007–08ನೇ ಸಾಲಿನಲ್ಲಿ ಹೊಸದಾಗಿ ಮಂಜೂರಾಗಿರುವ 8 ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಹಾಗೂ ಹಾಲಿ ಅಸ್ಥಿತ್ವದಲ್ಲಿರುವ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯುಬಿಲಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬೆಂಗಳೂರು ಇಲ್ಲಿಗೆ ಹೆಚ್ಚುವರಿಯಾಗಿ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007 (1), ದಿನಾಂಕ 6–7–2007.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 207, ದಿನಾಂಕ 24–8–2007.
3. ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಸಂಖ್ಯೆ: ಡಿಟಿಇ 16 ಡಿವಿಪಿ (1) 2007, 2320, ದಿನಾಂಕ 26/27–12–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ಮತ್ತು (2)ರ ಸರ್ಕಾರದ ಆದೇಶಗಳಲ್ಲಿ 2007–08ನೇ ಸಾಲಿನಲ್ಲಿ ಹೊಸದಾಗಿ ಮಂಜೂರಾರಿರುವ 8 ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಹಾಗೂ ಹಾಲಿ ಅಸ್ಥಿತ್ವದಲ್ಲಿರುವ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯುಬಿಲಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬೆಂಗಳೂರು ಇಲ್ಲಿಗೆ ಕೋರ್ಸುವಾರು ಬೋಧಕ : ಬೋಧಕೇತರ ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆರವರು ಬದಲಾಗಿರುವ ವಿಶ್ವವಿದ್ಯಾಲಯದ ಪಠ್ಯ ಕ್ರಮದ ಅನುಸಾರವಾಗಿ ಒಂಬತ್ತು ಇಂಜಿನಿಯರಿಂಗ್ ಕಾಲೇಜುಗಳ ಪೈಕಿ ಪ್ರತಿ ಇಂಜಿನಿಯರಿಂಗ್ ಕಾಲೇಜಿಗೆ ಹೆಚ್ಚುವರಿ ಹುದ್ದೆಗಳನ್ನು ಸೃಷ್ಟಿಸುವುದು ಅನಿವಾರ್ಯವೂ ಅಗತ್ಯವೂ ಆಗಿದ್ದು, ಹುದ್ದೆಗಳ ಅವಶ್ಯಕತೆ ಮೊದಲನೆ ವರ್ಷದಿಂದಲೇ ಇರುತ್ತದೆ ಹಾಗೂ ಈ ಹುದ್ದೆಗಳಿಗೆ ಪ್ರತಿ ವರ್ಷಕ್ಕೆ ಅಂದಾಜು ವೇತನ (ಆವರ್ತ ಖರ್ಚು) ರೂ. 10.00 ಲಕ್ಷಗಳನ್ನು (ಪ್ರತಿ ಕಾಲೇಜಿಗೆ) ಭರಿಸಬೇಕಾಗುತ್ತದೆ. ಸದರಿ ಖರ್ಚನ್ನು ಲೆಕ್ಕಶೀರ್ಷಿಕೆ 2203–00–112–0–02 ಇಂಜಿನಿಯರಿಂಗ್ ಕಾಲೇಜುಗಳು (ಯೋಜನೆ) ರಡಿ ಭರಿಸಲಾಗುವುದೆಂದು ಅದರಂತೆ ಅನುಬಂಧದಲ್ಲಿ ನಮೂದಿಸಿರುವಂತೆ ಅವಶ್ಯಕ ಹುದ್ದೆಗಳನ್ನು ಸೃಜಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಈ ಹಿನ್ನೆಲೆಯಲ್ಲಿ 8 ಹೊಸ ಇಂಜಿನಿಯರಿಂಗ್ ಕಾಲೇಜುಗಳು ಹಾಗೂ ಈಗಾಗಲೇ ಅಸ್ಥಿತ್ವದಲ್ಲಿರುವ ಸರ್ಕಾರಿ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯುಬಿಲಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬೆಂಗಳೂರು ಇಲ್ಲಿ ಹೊಸ ಕೋರ್ಸುಗಳನ್ನು ಪ್ರಾರಂಭ ಮಾಡುವ ಸಲುವಾಗಿ ಅವಶ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಿ ಮಂಜೂರು ಮಾಡುವ ಸಲುವಾಗಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 16 ಟಿಇಸಿ 2008, ಬೆಂಗಳೂರು, ದಿನಾಂಕ: 3ನೇ ಮೇ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಪ್ರಾರಂಭಿಸಲಾಗಿರುವ 8 ಇಂಜಿನಿಯರಿಂಗ್ ಕಾಲೇಜುಗಳು ಹಾಗೂ ಈಗಾಗಲೇ ಅಸ್ಥಿತ್ವದಲ್ಲಿರುವ ಶ್ರೀ ಕೃಷ್ಣರಾಜೇಂದ್ರ ಸಿಲ್ವರ್ ಜ್ಯುಬಿಲಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಬೆಂಗಳೂರು ಇಲ್ಲಿಗೆ ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಅವಶ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಸೃಜಿಸಿ ಮಂಜೂರು ಮಾಡಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ)

**ಸರ್ಕಾರಿ ಆದೇಶ ಸಂಖ್ಯೆ: ಇಡಿ 16 ಟಿಇಸಿ 2008, ಬೆಂಗಳೂರು, ದಿನಾಂಕ: 3ನೇ ಮೇ 2008 ಅನುಬಂಧ**

**ಪ್ರತಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿಗೆ ಅವಶ್ಯವಿರುವ ಹೆಚ್ಚುವರಿ ಹುದ್ದೆಗಳ ವಿವರ**

| ಕ್ರ. ಸಂ. | ಸರ್ಕಾರಿ ಇಂಜಿನಿಯರಿಂಗ್ ಕಾಲೇಜಿನ ಹೆಸರು | ಉಪನ್ಯಾಸಕರು (ಭೌತಶಾಸ್ತ್ರ) | ಉಪನ್ಯಾಸಕರು (ಭೌತಶಾಸ್ತ್ರ) | ದೈಹಿಕ ಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇತನ ಶ್ರೇಣಿ) | ಗ್ರಂಥಪಾಲಕರು (ಎಐಸಿಟಿಇ ವೇತನ ಶ್ರೇಣಿ) | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಸರ್ಕಾರಿ ಎಸ್‌ಕೆಎಸ್‌ಜೆಟಿ ಸಂಸ್ಥೆ, ಬೆಂಗಳೂರು | 1 | 1 | 1 | 1 | 4 |
| 2 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ರಾಮನಗರ | 1 | 1 | 1 | 1 | 4 |
| 3 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹಾಸನ | 1 | 1 | 1 | 1 | 4 |
| 4 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಕೆ.ಆರ್. ಪೇಟೆ | 1 | 1 | 1 | 1 | 4 |
| 5 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಚಾಮರಾಜನಗರ | 1 | 1 | 1 | 1 | 4 |
| 6 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಕುಶಾಲನಗರ | 1 | 1 | 1 | 1 | 4 |
| 7 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹೂವಿನಹಡಗಲಿ | 1 | 1 | 1 | 1 | 4 |
| 8 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ರಾಯಚೂರು | 1 | 1 | 1 | 1 | 4 |
| 9 | ಸರ್ಕಾರಿ ಇಂಜಿನಿಯರಿಂಗ್ ಕಾಲೇಜು, ಹಾವೇರಿ | 1 | 1 | 1 | 1 | 4 |
| | **ಒಟ್ಟು** | **9** | **9** | **9** | **9** | **36** |

**ಒಂಬತ್ತು ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಅವಶ್ಯವಿರುವ ಹೆಚ್ಚುವರಿ ಹುದ್ದೆಗಳ ಕ್ರೋಢೀಕೃತ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ವಿವರ | ವೇತನ ಶ್ರೇಣಿ ರೂ.ಗಳಲ್ಲಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | 2 | 3 | 4 |
| 1 | ಉಪನ್ಯಾಸಕರು (ಭೌತಶಾಸ್ತ್ರ) | 8000–13500 | 9 |
| 2 | ಉಪನ್ಯಾಸಕರು (ಇ&ಇ) | 8000–13500 | 9 |
| 3 | ದೈಹಿಕ ಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇ.ಶ್ರೇಣಿ) | 8000–13500 | 9 |
| 4 | ದೈಹಿಕ ಶಿಕ್ಷಣ ನಿರ್ದೇಶಕರು (ಎಐಸಿಟಿಇ ವೇ.ಶ್ರೇಣಿ) | 8000–13500 | 9 |
| | **ಒಟ್ಟು** | | **36** |

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 777

**ಎನ್.ಆರ್. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ)

**ವಿಷಯ :** ಬೇಲೂರಿನಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನ ಕಟ್ಟಡಕ್ಕೆ ಭೂಮಿಯನ್ನು ಹಸ್ತಾಂತರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು, ರವರ ಪತ್ರ ಸಂಖ್ಯೆ: ಕಾಶಿಇ 96–ಯೋಜನೆ–84–85, ದಿನಾಂಕ 13–11–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, ಹಾಸನ ಜಿಲ್ಲೆ ಬೇಲೂರಿನಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಾಗಿ ಬೇಲೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸೇರಿರುವ ಜಮೀನಿನಲ್ಲಿ ಸರ್ವೆ ಸಂಖ್ಯೆ: 78ರಲ್ಲಿ 5.00 ಎಕರೆಯನ್ನು ಸರ್ವೆ ಸಂಖ್ಯೆ 82 ರಲ್ಲಿ 5.00 ಎಕರೆ ಜಮೀನನ್ನು ಹೀಗೆ ಒಟ್ಟು 10.00 ಎಕರೆ ಜಮೀನನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಬಹುದೆಂದು ಅಭಿಪ್ರಾಯಿಸಿ, ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 11 ಯೋಸಕ 2008, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2008.**

**(ಇಡಿ 11 ಸ್ವೀಮರ(ಯುನಿಕ್) 2008, ದಿನಾಂಕ 21–1–2008)**

(3) ಹಾಸನ ಜಿಲ್ಲೆ ಬೇಲೂರಿನಲ್ಲಿ ಹೊಸದಾಗಿ ಪ್ರಾರಂಭವಾಗಿರುವ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜಿನ ಕಟ್ಟಡ ನಿರ್ಮಾಣ ಕಾಮಗಾರಿಗಾಗಿ ಬೇಲೂರಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸೇರಿರುವ ಜಮೀನಿನಲ್ಲಿ ಸರ್ವೆ ಸಂಖ್ಯೆ: 78ರಲ್ಲಿ 5.00 ಎಕರೆಯನ್ನು, ಸರ್ವೆ ಸಂಖ್ಯೆ 82ರಲ್ಲಿ 5.00 ಎಕರೆ ಜಮೀನನ್ನು ಹೀಗೆ ಒಟ್ಟು 10.00 ಎಕರೆ (ಹತ್ತು ಎಕರೆ ಮಾತ್ರ) ಜಮೀನನ್ನು ತಾಂತ್ರಿಕ ಶಿಕ್ಷಣ ಇಲಾಖೆಗೆ ಹಸ್ತಾಂತರಿಸಲು ನಿಯಮಾನುಸಾರ ಕ್ರಮ ಕೈಗೊಳ್ಳಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 367

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಹಾವೇರಿ ಜಿಲ್ಲೆ ರಾಣಿಬೆನ್ನೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 189 ಯೋಸಕ 2007, ದಿನಾಂಕ 3–10–2007.
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇಶ–102–ಯೋಜನೆ–07–08, ದಿನಾಂಕ 31–12–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2007–08ನೇ ಸಾಲಿಗೆ ಲೆಕ್ಕ ಶೀರ್ಷಿಕೆ 4202–01–203–1–01ರಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡದ ಹೊಸ ಕಾಮಗಾರಿಗೆ ಮತ್ತು ಮುಂದುವರಿಕೆ ಕಾಮಗಾರಿಗಳಿಗಾಗಿ ಒಟ್ಟು 22.9151 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

(2) ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, 2007–08ನೇ ಸಾಲಿಗೆ ಓದಲಾದ (1)ರ ಆದೇಶದಲ್ಲಿ ಹಾವೇರಿ ಜಿಲ್ಲೆ ರಾಣಿಬೆನ್ನೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಒದಗಿಸಿರುವುದರಿಂದ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಯನ್ನು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡರವರಿಂದ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 8 ಯೋಸಕ 2008, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2008.**

**(ಇಡಿ 36 ಸ್ವೀಮರ(ಯುನಿಕ್) 2007, ದಿನಾಂಕ 15–2–2008)**

(4) 2007–08ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣದ ಮುಂದುವರಿಕೆ ಕಾಮಗಾರಿ ಮತ್ತು ನೂತನವಾಗಿ ಪ್ರಾರಂಭಿಸಲಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಲೆಕ್ಕಶೀರ್ಷಿಕೆ 4202–01–203–1–01(ಯೋಜನೆ) ಯಡಿ ಬಿಡುಗಡೆ ಮಾಡಿರುವ 22.9151 ಕೋಟಿ ರೂ.ಗಳಲ್ಲಿ (ಇಪ್ಪತ್ತೆರಡು ಕೋಟಿ ತೊಂಭತ್ತೊಂದು ಲಕ್ಷದ ಐವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಹಾವೇರಿ ಜಿಲ್ಲೆ ರಾಣಿಬೆನ್ನೂರು ಸರ್ಕಾರಿ

ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಒದಗಿಸರುವುದರಿಂದ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಲಾಗಿದೆ.

(6) 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202-01-203-1-01 (ಯೋಜನೆ) ಯಡಿಯಲ್ಲಿ ಸದರಿ ಕಾಮಗಾರಿಗೆ ಬಿಡುಗಡೆ ಮಾಡಿರುವ ಅನುದಾನದ ಮಿತಿಯೊಳಗೆ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(7) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(8) ಸದರಿ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ ಯೋಇ 37 ಜಶ 2007, ದಿನಾಂಕ 17-4-2007 ಹಾಗೂ ಆ.ಇ 421 ವೆಚ್ಚ-8, 2007, ದಿನಾಂಕ 23-4-2007ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿಇ 73 ಐ.ಎಫ್.ಎಸ್. 2008, ದಿನಾಂಕ 30-1-2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 368

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಆರ್.ಐ.ಡಿ.ಎಫ್. ಕಾಮಗಾರಿಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಪಪೂಶಿಇ/ ಆರ್.ಐ.ಡಿ.ಎಫ್/2007-08/ ದಿನಾಂಕ 17-1-2008.

2. ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಪಪೂಶಿಇ/ ಆರ್.ಐ.ಡಿ.ಎಫ್./ಅನು.ಬಿ/2007-08/ ದಿನಾಂಕ 5-1-2008.

**ಪ್ರಸ್ತಾವನೆ :**

(1) ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರು ಸರ್ಕಾರಿ ಸ್ವತಂತ್ರ ಪದವಿ ಪೂರ್ವ ಕಾಲೇಜು, ಅಗರ ಹೆಚ್.ಎಸ್.ಆರ್. ಬಡಾವಣೆ ಇದಕ್ಕೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಹಂಚಿಕೆಯಾಗಿರುವ ಸಿ.ಎ. ನಿವೇಶನದ ಗುತ್ತಿಗೆ ಕರಾರು ಪತ್ರದ ನೊಂದಣಿ ಶುಲ್ಕ 93,480.00 ರೂ.ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

(2) ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರು ಆರ್.ಐ.ಡಿ.ಎಫ್-11 ಮತ್ತು ಆರ್.ಐ.ಡಿ.ಎಫ್.-12 ಯೋಜನೆಗಳಡಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಹೆಚ್ಚುವರಿ ತರಗತಿ ಕೊಠಡಿಗಳ ಮತ್ತು ಹೊಸ ಕಟ್ಟಡಗಳ ನಿರ್ಮಾಣ ಮಾಡಲು ಉದ್ದೇಶಿದ್ದು ಅದಕ್ಕಾಗಿ ಆರ್.ಐ.ಡಿ.ಎಫ್-11ರಡಿಯ ಕಾಮಗಾರಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 95 ಯೋಸಕ 2006, ದಿನಾಂಕ 23-3-2006ರಲ್ಲಿ 10.00 ಕೋಟಿ ರೂಪಾಯಿಗಳನ್ನು ಮತ್ತು ಸರ್ಕಾರದ ಆದೇಶ ಸಂಖ್ಯೆ ಇಡಿ 325 ಯೋಸಕ 2007, ದಿನಾಂಕ 24-8-2007, ತಿದ್ದುಪಡಿ ಆದೇಶ ಸಂಖ್ಯೆ ಇಡಿ 256 ಯೋಸಕ 2007, ದಿನಾಂಕ 12-9-2007 ಮತ್ತು ಮತ್ತೊಂದು ತಿದ್ದುಪಡಿ ಆದೇಶ ಸಂಖ್ಯೆ: ಇಡಿ 325 ಯೋಸಕ 2007, ದಿನಾಂಕ 17-10-2007ರಲ್ಲಿ 963.65048 ರೂಪಾಯಿಗಳನ್ನು ಬಿಡುಗಡೆ ಮಾಡಲಾಗಿತ್ತು ಎಂದು ತಿಳಿಸಿ ಅದನ್ನು ಆರ್.ಐ.ಡಿ.ಎಫ್-11ರ ಕಾಮಗಾರಿಗಳ ಪ್ರಗತಿ ಆಧಾರದ ಮೇಲೆ ಜಿಲ್ಲಾ ಪಂಚಾಯತ್‌ಗಳಿಗೆ ಬಿಡುಗಡೆ ಮಾಡಲಾಗಿದೆ ಎಂದು ತಿಳಿಸಿರುತ್ತಾರೆ.

(3) ಈಗ ಆರ್.ಐ.ಡಿ.ಎಫ್-11 ಯೋಜನೆಯ ಕಾಮಗಾರಿಗಳು ಮುಗಿಯುತ್ತಾ ಬಂದಿರುವುದರಿಂದ ಮತ್ತು ಆರ್.ಐ.ಡಿ.ಎಫ್-12ರ ಕಾಮಗಾರಿಗಳು ಪ್ರಾರಂಭವಾಗಿರುವುದರಿಂದ ಈ ಕೆಳಕಂಡಂತೆ ಅನುದಾನದ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ.

- ಆರ್.ಐ.ಡಿ.ಎಫ್-11 ಯೋಜನೆಯ ಅನುಮೋದಿತ ಒಟ್ಟು ವೆಚ್ಚದ ಬಾಕಿ ರೂ. 983.80 ಲಕ್ಷಗಳು ಹಣ
- ಆರ್.ಐ.ಡಿ.ಎಫ್-11 ಯೋಜನೆಗೆ ಪರಿಷ್ಕೃತ ಎಸ್.ಆರ್. ದರದಂತೆ ರೂ. 1473.90 ಲಕ್ಷಗಳು ಬಿಡುಗಡೆ ಮಾಡಬೇಕಾಗಿರುವ ಹೆಚ್ಚುವರಿ ಅಂದಾಜು ಮೊತ್ತ

➢ ಆರ್.ಐ.ಡಿ.ಎಫ್-12 ಯೋಜನೆಯ ಕಾಮಗಾರಿಗೆ ಒಟ್ಟು ಕಾಮಗಾರಿಗಳ ಅನುಮೋದಿತ ಅಂದಾಜು ವೆಚ್ಚ 6665.60 ಲಕ್ಷಗಳು. ಇದರಲ್ಲಿ ಮೊದಲನೇ ಕಂತಾಗಿ 1/3ರಷ್ಟು ಹಣವನ್ನು ಬಿಡುಗಡೆ ಮಾಡಬೇಕಾಗಿರುವ ಹಣ ರೂ. 2221.86 ಲಕ್ಷಗಳು

**ಒಟ್ಟು ರೂ. 4679.56 ಲಕ್ಷಗಳು**

(4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 143 ಯೋಯೋಕ 2007, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008.**

**(ಇಡಿ 32 ಸ್ವೀಮರ (ಯುನಿಕ್) 2008, ದಿನಾಂಕ 13-2-2008)**

(5) 2007-08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202-01-203-1-05-385 (ಯೋಜನೆ) ಯಡಿ ಒದಗಿಸಲಾಗಿರುವ 1000.00 ಲಕ್ಷ ರೂ.ಗಳ (ಒಂದು ಸಾವಿರ ಲಕ್ಷ ರೂ.ಗಳು ಮಾತ್ರ) ಅನುದಾನದಲ್ಲಿ 93,480.00 ರೂ.ಗಳನ್ನು (ತೊಂಬತ್ತ ಮೂರು ಸಾವಿರದ ನಾನೂರ ಎಂಭತ್ತು ರೂಪಾಯಿಗಳು ಮಾತ್ರ) ಸರ್ಕಾರಿ ಸ್ವತಂತ್ರ ಪದವಿ ಪೂರ್ವ ಕಾಲೇಜು, ಅಗರ ಹೆಚ್.ಎಸ್.ಆರ್. ಬಡಾವಣೆ ಇದಕ್ಕೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಹಂಚಿಕೆಯಾಗಿರುವ ಸಿ.ಎ. ನಿವೇಶನದ ಗುತ್ತಿಗೆ ಕರಾರು ಪತ್ರದ ನೊಂದಣಿ ಶುಲ್ಕಕ್ಕಾಗಿ ಮತ್ತು ಉಳಿಕೆ 999.06520 ಲಕ್ಷ ರೂ.ಗಳನ್ನು (ಒಂಭೈನೂರಾ ತೊಂಬತ್ತೊಂಭತ್ತು ಲಕ್ಷದ ಆರು ಸಾವಿರದ ಐನೂರಾ ಇಪ್ಪತ್ತು ರೂಪಾಯಿಗಳು ಮಾತ್ರ) ಆರ್.ಐ.ಡಿ.ಎಫ್-11 ಮತ್ತು 12 ಯೋಜನೆಯಡಿಯ ಅನುಮೋದಿತ ವೆಚ್ಚದ ಒಟ್ಟು ಬಾಕಿಗಾಗಿ ಬಿಡುಗಡೆ ಮಾಡಲು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ ಸದರಿ ಮೊತ್ತವನ್ನು ಸೆಳೆದು ಜಿಲ್ಲೆಗಳಿಗೆ ಡಿ.ಡಿ. ಮೂಲಕ ಕಳುಹಿಸಲು ಸೂಚಿಸಿದೆ.

(6) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(7) ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ: 511 ವೆಚ್ಚ-8/07/ ದಿನಾಂಕ 28-1-2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 369

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** 2006-07ನೇ ಸಾಲಿನಲ್ಲಿ ಸಾಲಿಗ್ರಾಮದಲ್ಲಿ ಪ್ರಾರಂಭಿಸಲಾದ ಹೊಸ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲರಿಗೆ ಬಟವಾಡೆ ಅಧಿಕಾರ ಪರವಾನಗಿ ನೀಡುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಶಿಇ 30 ಆಯವ್ಯಯ ಹೊಕಾ 07-08, ದಿನಾಂಕ 31ನೇ ಆಗಸ್ಟ್ 2007.

**ಪ್ರಸ್ತಾವನೆ :**

(1) ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರದಲ್ಲಿ 2006-07ನೇ ಸಾಲಿನಲ್ಲಿ ಸಾಲಿಗ್ರಾಮದಲ್ಲಿ ಪ್ರಾರಂಭಿಸಲಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಕಾರ್ಯ ನಿರ್ವಹಿಸಲು, ಬೋಧಕ/ಬೋಧಕೇತರ ಸಿಬ್ಬಂದಿಗಳ ವೇತನ ಮತ್ತು ವೇತನೇತರ ಬಿಲ್ಲುಗಳಿಗೆ ಖಜಾನೆಗಳಲ್ಲಿ ಮಾನ್ಯತೆ ದೊರಕಿಸಬೇಕಾಗಿರುವುದರಿಂದ, ಈ ಕಾಲೇಜುಗಳ ಪ್ರಾಂಶುಪಾಲರಿಗೆ ಬಟವಾಡೆ ಅಧಿಕಾರದ ಪರವಾನಗಿಯನ್ನು ಮಹಾಲೇಖಪಾಲರ ಕಛೇರಿಯಿಂದ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(2) ಇದರ ಬಗ್ಗೆ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 380 ಯೋಯೋಕಾ 2007, ಬೆಂಗಳೂರು, ದಿನಾಂಕ: 21ನೇ ಜನವರಿ 2008.**

**(ಇಡಿ 9 ಸ್ವೀಮರ (ಯುನಿಕ್) 2008, ದಿನಾಂಕ 22-1-2008)**

(3) 2006-07ನೇ ಸಾಲಿನಲ್ಲಿ ಸಾಲಿಗ್ರಾಮದಲ್ಲಿ ಹೊಸದಾಗಿ ಪ್ರಾರಂಭಿಸಲಾದ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ಕಾರ್ಯ ನಿರ್ವಹಿಸಲು, ಬೋಧಕ/ಬೋಧಕೇತರ ಸಿಬ್ಬಂದಿಗಳ ವೇತನ ಮತ್ತು ವೇತನೇತರ ಬಿಲ್ಲುಗಳಿಗೆ ಖಜಾನೆಗಳಲ್ಲಿ ಮಾನ್ಯತೆ ದೊರಕಿಸುವ ಸಲುವಾಗಿ, ಸಂಬಂಧಿಸಿದ ಕಾಲೇಜುಗಳ ಪ್ರಾಂಶುಪಾಲರುಗಳಿಗೆ ಕರ್ನಾಟಕ ಆದೇಶ ಸಂಖ್ಯೆ: ಅನುಚ್ಛೇದ 49 ಮತ್ತು 50ರ ನಿಯಮಾನುಸಾರ ಮತ್ತು ಕರ್ನಾಟಕ ಆದೇಶ ಸಂಖ್ಯೆ (17) C (2)ರಲ್ಲಿರುವಂತೆ

ಮಹಾಲೇಖಪಾಲರ ಅನುಮತಿ ಷರತ್ತಿಗೆ ಒಳಪಟ್ಟು ಹಣಸೆಳೆಯುವ ಬಟವಾಡೆ ಅಧಿಕಾರಿಗಳಾಗಿ ಪರವಾನಗಿಯನ್ನು ನೀಡಲಾಗಿದೆ.

(4) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1052 ವೆಚ್ಚ–8 2007, ದಿನಾಂಕ 13–3–2007ರ ಸಹಮತಿಯನ್ವರ ಸದರಿ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 287

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಸರ್ಕಾರಿ ಪದವಿ ಪೂರ್ವ ಕಾಲೇಜು ಮಂಡಿಕಲ್ಲು, ಚಿಕ್ಕಬಳ್ಳಾಪುರ ತಾಲ್ಲೂಕು ಚಿಕ್ಕಬಳ್ಳಾಪುರ ಜಿಲ್ಲೆ ಇಲ್ಲಿಗೆ ಹೊಸ ಕಟ್ಟಡವನ್ನು ನಿರ್ಮಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಪಪೂಶಿಇ/ ಆರ್.ಐ.ಡಿ.ಎಫ್./ 2007–08, ದಿನಾಂಕ 31–1–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ರವರು ಸರ್ಕಾರಿ ಪದವಿ ಪೂರ್ವ ಕಾಲೇಜು, ಮಂಡಿಕಲ್ಲು, ಚಿಕ್ಕಬಳ್ಳಾಪುರ ಜಿಲ್ಲೆ ಇದಕ್ಕೆ ಹೊಸ ಕಟ್ಟಡ/ತರಗತಿ ಕೊಠಡಿಗಳನ್ನು ನಿರ್ಮಾಣ ಮಾಡುವ ಪ್ರಸ್ತಾವನೆ ಆರ್.ಐ.ಡಿ.ಎಫ್. 11, 12 ಮತ್ತು 13ರಡಿ ಸೇರಿರುವುದಿಲ್ಲವೆಂದು ತಿಳಿಸಿ, ಇದಕ್ಕೆ ಹೊಸ ಕಟ್ಟಡ/ತರಗತಿ ಕೊಠಡಿಗಳು ನಿರ್ಮಾಣ ಮಾಡುವ ಪ್ರಸ್ತಾವನೆಯನ್ನು ಅಪೆಂಡಿಕ್ಸ್–ಇ ನಡಿ ಸೇರಿಸುವಂತೆ ತಿಳಿಸಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 41 ಯೋಸಕ 2008, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2008.**
**(ಇಡಿ 23 ಸ್ಕೀಮರ (ಯುನಿಕ್) 2008, ದಿನಾಂಕ 2–2–2008)**

(3) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–02–800–1–10–059 (ಯೋಜನೆ) ಯಡಿ ಒದಗಿಸಲಾಗಿರುವ ಅನುದಾನದಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆಯ ಮಂಡಿಕಲ್ಲು, ಸರ್ಕಾರಿ ಪದವಿ ಪೂರ್ವ ಕಾಲೇಜಿನ ಪ್ರೌಢಶಾಲಾ ವಿಭಾಗಕ್ಕೆ ಹೊಸ ಕಟ್ಟಡ/ತರಗತಿ ಕೊಠಡಿಗಳನ್ನು ನಿರ್ಮಿಸಲು 36.00 ಲಕ್ಷ ರೂ.ಗಳನ್ನು (ಮೂವತ್ತಾರು ಲಕ್ಷ ರೂ.ಗಳು ಮಾತ್ರ), ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಬಿಡುಗಡೆ ಮಾಡಲಾಗಿದೆ. ಈ ಶೀರ್ಷಿಕೆಗೆ ಹೆಚ್ಚುವರಿಯಾಗಿ ಲೆಕ್ಕಶೀರ್ಷಿಕೆ 2202–80–800–0–26–059 (ಯೋಜನೆ) ಅಡಿಯಿಂದ ಮರು ಹೊಂದಾಣಿಕೆ ಮೂಲಕ 36.00 ಲಕ್ಷ ರೂ.ಗಳನ್ನು (ಮೂವತ್ತಾರು ಲಕ್ಷ ರೂ.ಗಳು ಮಾತ್ರ) ಬಿಡುಗಡೆ ಮಾಡಲು ಮರು ಹೊಂದಾಣಿಕೆ ಪ್ರಸ್ತಾವನೆಯನ್ನು ಅನುಮೋದಿಸಿದೆ.

**ಷರತ್ತುಗಳು:**

- ➢ ಸದರಿ ಕಾಮಗಾರಿಯನ್ನು ನಿರ್ಮಿಸಿ ಕೇಂದ್ರ/ ಕರ್ನಾಟಕ ಭೂ ಸೇನಾ ನಿಗಮಕ್ಕೆ ವಹಿಸತಕ್ಕದ್ದು.
- ➢ ಎಲ್ಲಾ ಖರೀದಿಗಳಿಗೆ ಸಂಬಂಧಿಸಿದಂತೆ ಪ್ರಚಲಿತವಿರುವ ಕರ್ನಾಟಕ ಪಾರದರ್ಶಕ ಕಾಯ್ದೆಯನ್ವಯ ಕ್ರಮ ಕೈಗೊಳ್ಳತಕ್ಕದ್ದು.
- ➢ ದರ ಪರಿಷ್ಕರಣೆಗೆ ಪುನಃ ಪ್ರಸ್ತಾಪಿಸಬಾರದೆಂದೂ ಸೂಚಿಸಿದೆ.

(4) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ. 175 ಐ.ಎಫ್.(ಬಿಎ) 2008/ ದಿನಾಂಕ 2–2–2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 289

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** 2007–08ನೇ ಸಾಲಿನ ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಕಟ್ಟಡಗಳ, ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಬೋರ್‌ವೆಲ್ ಮತ್ತು ಕಾಂಪೌಂಡ್ ಸೌಲಭ್ಯ ಕಲ್ಪಿಸಲು ಅನುದಾನ ಮಂಜೂರು ಮಾಡುವ ಕುರಿತು.

**ಓದಲಾಗಿದೆ:** ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಾ ಅಭಿಯಾನ, ಕರ್ನಾಟಕ ರವರ ಪತ್ರ ಸಂಖ್ಯೆ ಸಶಿಅ/ಸಿ.ಕಾ/ಹೆ.ಅನು.ಮ/2007–08, ದಿನಾಂಕ 11ನೇ ಫೆಬ್ರವರಿ 2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಾ ಅಭಿಯಾನ, ಕರ್ನಾಟಕ ರವರು, ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಕಟ್ಟಡಗಳಿಗೆ ಘಟಕ ವೆಚ್ಚವನ್ನು ಎಂ.ಹೆಚ್. ಆರ್.ಡಿ. ನವದೆಹಲಿ ರವರೇ ನಿಗಧಿಪಡಿಸುತ್ತಾರೆ. ಶಾಲಾ ಕಟ್ಟಡ ಹಾಗೂ ಹೆಚ್ಚುವರಿ ಕೊಠಡಿಗಳಿಗಾಗಿ ರಾಜ್ಯದ ಚಾಲ್ತಿಯಲ್ಲಿರುವ PWD Schedule Rate ಆಧಾರದ ಮೇಲೆ ಘಟಕ ವೆಚ್ಚವನ್ನು ನಿಗದಿಸಿಕೊಳ್ಳಬಹುದಾಗಿದೆ. ಅದರಂತೆ, ಶಾಲಾ ಕಟ್ಟಡ ಹಾಗೂ ಹೆಚ್ಚುವರಿ ಕೊಠಡಿಗಳನ್ನು ಆಯಾ ವರ್ಷದಲ್ಲಿ ಚಾಲ್ತಿಯಲ್ಲಿರುವ KPWD SR ದರಗಳನ್ವಯ ಘಟಕ ವೆಚ್ಚವನ್ನು ನಿಗದಿಸಿಕೊಳ್ಳಲಾಗುತ್ತಿದೆ ಎಂದು ತಿಳಿಸಿಸಿರುತ್ತಾರೆ.

(2) ಬಿ.ಆರ್.ಸಿ. ಮತ್ತು ಸಿ.ಅರ್.ಸಿ. ಕಟ್ಟಡಗಳಿಗೆ 2001–02ನೇ ಸಾಲಿನಲ್ಲಿ ನಿಗಧಿಯಾಗಿದ್ದ ಘಟಕ ವೆಚ್ಚ ರೂ. 6.00 ಲಕ್ಷ ಹಾಗೂ ರೂ. 2.00 ಲಕ್ಷಗಳಿದ್ದು, ಪರಿಷ್ಕರಿಸಿರುವುದಿಲ್ಲ. ಬಿ.ಆರ್.ಸಿ. ಮತ್ತು ಸಿ.ಅರ್.ಸಿ. ಕಟ್ಟಡಗಳಿಗೆ ಅನುಮೋದಿತ ನಕ್ಷೆಗಳಿಗನುಗುಣವಾಗಿ ಅಂದಾಜು ಪಟ್ಟಿ ತಯಾರಿಸಲಾಗಿದ್ದು, ನಿಗಧಿತ ಘಟಕ ಮೊತ್ತವನ್ನು ವಾಸ್ತವಿಕ ಅಂದಾಜು ಪಟ್ಟಿಯಲ್ಲಿನ ವ್ಯತ್ಯಾಸದ ಮೊತ್ತವನ್ನು ರಾಜ್ಯ ಸರ್ಕಾರವೇ ಭರಿಸಬೇಕಾಗಿದ್ದು ವಿವರ ಈ ಕೆಳಕಂಡಂತಿದೆ.

| ಕ್ರ. ಸಂ. | ಚಟುವಟಿಕೆ ವಿವರ | ಅನುಮೋದನೆಯಾದ ಕಾಮಗಾರಿಗಳ ಸಂಖ್ಯೆ | ಎಂ.ಹೆಚ್.ಆರ್.ಡಿ. ಅನುಮೋದಿಸಿದ ಘಟಕ ವೆಚ್ಚ | ಕೆ.ಪಿ.ಡಬ್ಲ್ಯೂಡಿ 07–08 ಎಸ್.ಆರ್. ಪ್ರಕಾರ ಪ್ರತಿ ಘಟಕ ವೆಚ್ಚ | ಹೆಚ್ಚುವರಿ ಬೇಕಾಗುವ ಮೊತ್ತ | ಒಟ್ಟು ಹೆಚ್ಚುವರಿ ಬೇಕಾಗುವ ಮೊತ್ತ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಬಿ.ಆರ್.ಸಿ. | 20 | 6.00 | 12.70 | 6.70 | 134.00 |
| 2 | ಸಿ.ಆರ್.ಸಿ. | 358 | 2.00 | 4.65 | 2.65 | 948.70 |
| | | | | | **ಒಟ್ಟು ಅನುದಾನ** | **1082.70** |

(3) ರಾಜ್ಯಕ್ಕೆ ಮಂಜೂರಾದ 61 ಕೆ.ಜಿ.ಬಿ.ವಿ. ಸನಿವಾಸ ಶಾಲಾ ಕಟ್ಟಡಗಳ ಪೈಕಿ ವಿವಿಧ ಕಾರಣಗಳಿಂದ ಪ್ರಾರಂಭವಾಗಿರದ 7 ಶಾಲಾ ಕಟ್ಟಡಗಳಿಗೆ KPWD SR ದರಗಳನ್ವಯ ಪರಿಷ್ಕೃತ ಅಂದಾಜು ಮೊತ್ತ ಪ್ರತಿ ಕಟ್ಟಡಕ್ಕೆ ರೂ. 23.00 ಲಕ್ಷಗಳಾಗಿದ್ದು, ಇದು ಎಂ.ಹೆಚ್.ಆರ್.ಡಿ.ಯವರು ನಿಗಧಿಪಡಿಸಿರುವ ಘಟಕ ವೆಚ್ಚ ರೂ. 15.00 ಲಕ್ಷಗಳಿಗಿಂತ 8.00 ಲಕ್ಷ ರೂ. ಹೆಚ್ಚುವರಿಯಾಗಿರುತ್ತದೆ. ಅದರಂತೆ 7 ಕಟ್ಟಡಗಳಿಗೆ 56.00 ಲಕ್ಷ ರೂ.ಗಳನ್ನು ರಾಜ್ಯ ಸರ್ಕಾರ ಭರಿಸಬೇಕಾಗುತ್ತದೆ ಎಂದು ರಾಜ್ಯ ಯೋಜನಾ ನಿರ್ದೇಶಕರು ಸರ್ವ ಶಿಕ್ಷಾ ಅಭಿಯಾನ ರವರು ತಿಳಿಸಿರುತ್ತಾರೆ.

(4) ಮಂಜೂರಾದ 61 ಕೆ.ಜಿ.ಬಿ.ವಿ. ಕಟ್ಟಡಗಳಲ್ಲಿ ಕೇವಲ 13 ಕಟ್ಟಡಗಳಿಗೆ ಕಾಂಪೌಂಡ್ ಇದ್ದು, 48 ಕಟ್ಟಡಗಳಿಗೆ ಕಾಂಪೌಂಡ್ ಸೌಲಭ್ಯ ಒದಗಿಸಬೇಕಾಗಿದೆ. 2007–08ನೇ ಸಾಲಿನ ದರಗಳನ್ವಯ ಪ್ರತಿ ಮೀಟರ್ ಕಾಂಪೌಂಡ್‌ಗೆ ರೂ. 1200/–ರಂತೆ ಒಟ್ಟು 160.14 ಲಕ್ಷ ರೂ.ಗಳು ಬೇಕಾಗುತ್ತದೆ ಎಂದೂ ತಿಳಿಸಿರುತ್ತಾರೆ.

(5) ಮಂಜೂರಾದ 61 ಕೆ.ಜಿ.ಬಿ.ವಿ. ಸನಿವಾಸ ಕಟ್ಟಡಗಳಲ್ಲಿ 06 ಕಟ್ಟಡಗಳಿಗೆ ನೀರಿನ ವ್ಯವಸ್ಥೆಯಿದ್ದು, 55 ಕಟ್ಟಡಗಳಿಗೆ ನೀರಿನ ಸೌಲಭ್ಯ ಕಲ್ಪಿಸಲು ಪ್ರತಿ ಕಟ್ಟಡಗಳಿಗೆ Drilling of Borewell, Casing pipe, Pipeline, sump and electricity facility ಗಳನ್ನು ಮಾಡಿಸಲು 1.25 ಲಕ್ಷ ರೂ.ಗಳಂತೆ ಒಟ್ಟು 68.75 ಲಕ್ಷ ರೂ.ಗಳು ಬೇಕಾಗುತ್ತದೆ ಎಂದು ತಿಳಿಸಿ, ಮೇಲ್ಕಂಡ ಎಲ್ಲಾ ಕಾಮಗಾರಿಗಳಿಗೆ ಬೇಕಾಗುವ ಒಟ್ಟು ಅನುದಾನದ ವಿವರ ಈ ಕೆಳಕಂಡಂತೆ ನೀಡಿ, ಈ ಅನುದಾನವನ್ನು ರಾಜ್ಯ ಸರ್ಕಾರವು ನೀಡಬೇಕೆಂದು ಕೋರಿರುತ್ತಾರೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಚಟುವಟಿಕೆಗಳ ವಿವರ | ಕೋರಿರುವ ಒಟ್ಟು ಮೊತ್ತ |
|---|---|---|
| 1 | ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಕಟ್ಟಡಗಳಿಗೆ ಬೇಕಾಗುವ ಹೆಚ್ಚುವರಿ ಮೊತ್ತ | 1082.70 |
| 2 | 7 ಕೆ.ಜಿ.ಬಿ.ವಿ. ಸನಿವಾಸ ಶಾಲಾ ಕಟ್ಟಡಗಳಿಗೆ ಬೇಕಾಗುವ ಹೆಚ್ಚುವರಿ ಮೊತ್ತ | 56.00 |
| 3 | 48 ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಕಾಂಪೌಂಡ್ ನಿರ್ಮಿಸಲು ಬೇಕಾದ ಹೆಚ್ಚುವರಿ ಮೊತ್ತ | 160.14 |
| 4 | 55 ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಬೋರ್‌ವೆಲ್ ಕಲ್ಪಿಸಲು ಬೇಕಾದ ಹೆಚ್ಚುವರಿ ಮೊತ್ತ | 68.75 |
| | **ಒಟ್ಟು ಮೊತ್ತ** | **1367.59** |

(6) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 274 ಎಂ.ಸಿ.ಡಿ. 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2008.**

**(ಇಡಿ 95 ಸ್ಕೀಮರ (ಯುನಿಕ್) 2008, ದಿನಾಂಕ 20-3-2008)**

(7) ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಕಟ್ಟಡಗಳ, ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಬೋರ್‌ವೆಲ್ ಮತ್ತು ಕಾಂಪೌಂಡ್ ಸೌಲಭ್ಯ ಕಲ್ಪಿಸಲು ಒಟ್ಟು 1367.59 ಲಕ್ಷ ರೂ.ಗಳನ್ನು (ಹದಿಮೂರು ಕೋಟಿ ಅರವತ್ತೇಳು ಲಕ್ಷ ಐವತ್ತೊಂಭತ್ತು ಸಾವಿರ ರೂ.ಗಳು ಮಾತ್ರ) ಒಂದು ಬಾರಿಗೆ ಮಾತ್ರ ಈ ಕೆಳಕಂಡಂತೆ ಹಂಚಿಕೆ ಮಾಡಿ ರಾಜ್ಯ ಯೋಜನಾ ನಿರ್ದೇಶಕರು, ಸರ್ವ ಶಿಕ್ಷಾ ಅಭಿಯಾನ ಕರ್ನಾಟಕ ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತನ್ನು ವಿಧಿಸಿ ಬಿಡುಗಡೆ ಮಾಡಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ.ಸಂ. | ಚಟುವಟಿಕೆಗಳ ವಿವರ | ಬಿಡುಗಡೆ ಮಾಡುತ್ತಿರುವ ಮೊತ್ತ |
|---|---|---|
| 1 | ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಕಟ್ಟಡಗಳಿಗೆ ಬೇಕಾಗುವ ಹೆಚ್ಚುವರಿ ಮೊತ್ತ | 1082.70 |
| 2 | 7 ಕೆ.ಜಿ.ಬಿ.ವಿ. ಸನಿವಾಸ ಶಾಲಾ ಕಟ್ಟಡಗಳಿಗೆ ಬೇಕಾಗುವ ಹೆಚ್ಚುವರಿ ಮೊತ್ತ | 56.00 |
| 3 | 48 ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಕಾಂಪೌಂಡ್ ನಿರ್ಮಿಸಲು ಬೇಕಾದ ಹೆಚ್ಚುವರಿ ಮೊತ್ತ | 160.14 |
| 4 | 55 ಕೆ.ಜಿ.ಬಿ.ವಿ. ಸನಿವಾಸ ಶಾಲೆಗಳಿಗೆ ಬೋರ್‌ವೆಲ್ ಕಲ್ಪಿಸಲು ಬೇಕಾದ ಹೆಚ್ಚುವರಿ ಮೊತ್ತ | 68.75 |
| | **ಒಟ್ಟು ಮೊತ್ತ** | **1367.59** |

**ಷರತ್ತುಗಳು:**

- ಇನ್ನು ಮುಂದೆ ಕಸ್ತುರಬಾ ಗಾಂಧಿ ಬಾಲಿಕಾ ವಿದ್ಯಾಲಯಕ್ಕೆ ಸಂಬಂಧಿಸಿದಂತೆ ಎಲ್ಲಾ ಅಗತ್ಯತೆಗಳಿಗೆ ಅನುದಾನವನ್ನು ಅಂದಾಜಿನಲ್ಲಿಯೇ ಸೇರಿಸಿಕೊಳ್ಳತಕ್ಕದ್ದು.
- ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಗಳಿಗೆ ಸಂಬಂಧಿಸಿದ ಎಲ್ಲಾ ಅಗತ್ಯತೆಗಳನ್ನು ಮತ್ತು ಸೌಲಭ್ಯಗಳನ್ನು ಭಾರತ ಸರ್ಕಾರವು ಅನುಮೋದಿಸಿದ ಘಟಕ ವೆಚ್ಚಕ್ಕೆ ಮಿತಿಗೊಳಿಸತಕ್ಕದ್ದು.

(8) ಇದಕ್ಕೆ ಸಂಬಂಧಿಸಿದ ವೆಚ್ಚವನ್ನು 2007-08ನೇ ಸಾಲಿಗೆ ಆಯವ್ಯಯ ಲೆಕ್ಕಶೀರ್ಷಿಕೆ 2202-01-800-1-44-059 (ಯೋಜನೆ) ಅಡಿ ನಿಗಧಿಯಾಗಿರುವ ಅನುದಾನದ ಮಿತಿಯೊಳಗೇ ಭರಿಸಲು ಅನುಮತಿ ನೀಡಿದೆ.

(9) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ. 226: ಐ.ಎಫ್.(ಬಿ.ಎ.) 2008/ ದಿನಾಂಕ 16-2-2008ರಲ್ಲಿನ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್.ಡಿ. 213 ವೆಚ್ಚ-8/08/ ದಿನಾಂಕ 18-3-2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 569

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಗದಗ ತಾಲ್ಲೂಕು ಮುಳಗುಂದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಹೆಸರನ್ನು ದಾನಿಗಳ ಹೆಸರಿನಲ್ಲಿ ನಾಮಕರಣ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 51 ಯೋಯೋಕ 89, ದಿನಾಂಕ 11-9-1989.
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ ಕಾ.ಶಿ.ಇ. 95: ಯೋಜನೆ 2007-08, ದಿನಾಂಕ 9-4-2008.

**ಪ್ರಸ್ತಾವನೆ :**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ವಿದ್ಯಾಸಂಸ್ಥೆಗಳಿಗೆ, ದಾನಕೊಟ್ಟ ಗಣ್ಯ ವ್ಯಕ್ತಿಗಳ ನಾಮಕರಣ ಮಾಡುವ ಬಗ್ಗೆ ಆದೇಶ ಹೊರಡಿಸಲಾಗಿದೆ.

(2) ಮೇಲೆ ಓದಲಾದ (2)ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರು ರವರು ಗದಗ ಜಿಲ್ಲೆ ಮುಳಗುಂದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ ಐದು ಎಕರೆ ಜಮೀನನ್ನು

ಶ್ರೀ ಆರ್.ಎನ್. ದೇಶಪಾಂಡೆರವರು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ "ಶ್ರೀ ಆರ್.ಎನ್. ದೇಶಪಾಂಡೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು" ಎಂದು ನಾಮಕರಣ ಮಾಡುವ ಬಗ್ಗೆ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 114 ಯೋಸಕ 2008, ಬೆಂಗಳೂರು, ದಿನಾಂಕ: 5ನೇ ಮೇ 2008.**

**(ಇಡಿ 116 ಸ್ವೀಮರ(ಯುನಿಕ್) 2008, ದಿನಾಂಕ 5-5-2008)**

(4) ಗದಗ ಜಿಲ್ಲೆ ಮುಳಗುಂದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣಕ್ಕಾಗಿ 5 ಎಕರೆ ಜಮೀನನ್ನು ಶ್ರೀ ಆರ್.ಎನ್. ದೇಶಪಾಂಡೆಯವರು ದಾನವಾಗಿ ನೀಡಿದ್ದು, ಅವರ ಅಪೇಕ್ಷೆಯಂತೆ ಸದರಿ ಕಾಲೇಜಿಗೆ "ಶ್ರೀ ಆರ್.ಎನ್. ದೇಶಪಾಂಡೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು" ಎಂದು ನಾಮಕರಣ ಮಾಡಲು, ಸರ್ಕಾರವು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 801

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಡಿ.ಎಸ್.ಇ.ಆರ್.ಟಿ. ಕಛೇರಿಯಲ್ಲಿ ಎಲ್.ಪಿ.ಓ. ತಂತ್ರಾಂಶವನ್ನು ಅನುಷ್ಠಾನಗೊಳಿಸುವ ಬಗ್ಗೆ ಹಾಗೂ ಮಾಹಿತಿ ಕೇಂದ್ರವನ್ನು ತೆರೆಯುವ ಬಗ್ಗೆ ಈ ಕಛೇರಿಗೆ ಅಗತ್ಯವಿರುವ ಕಂಪ್ಯೂಟರ್ ಹಾಗೂ ಅಧೀನ ತರಬೇತಿ ಸಂಸ್ಥೆಗಳಿಗೆ ಡಿಜಿಟಲ್ ಕಾಪಿಯರ್ ಇತ್ಯಾದಿಗಳ ಸರಬರಾಜಿಗೆ ಸಂಬಂಧಿಸಿದಂತೆ ಆಯವ್ಯಯ ಒದಗಿಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ರಾಜ್ಯ ಶಿಕ್ಷಣ ತರಬೇತಿ ಮತ್ತು ಸಂಶೋಧನೆ ಇಲಾಖೆ, ಬೆಂಗಳೂರು ರವರ ಏಕ ಕಡತ ಸಂಖ್ಯೆ: ಓಬಿ5/ಎಲ್.ಎಂ.ಎಸ್./ಎಫ್.ಎಂ.ಎಸ್/16/ 2007-08, ದಿನಾಂಕ 5-2-2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ರಾಜ್ಯ ಶಿಕ್ಷಣ ತರಬೇತಿ ಮತ್ತು ಸಂಶೋಧನೆ ಇಲಾಖೆ, ಬೆಂಗಳೂರು ರವರು ಡಿ.ಎಸ್.ಇ.ಆರ್.ಟಿ. ಕಛೇರಿಯಲ್ಲಿ ಎಲ್.ಪಿ.ಓ. ತಂತ್ರಾಂಶವನ್ನು ಅನುಷ್ಠಾನಗೊಳಿಸುವ ಸಂಬಂಧದಲ್ಲಿ ಈಗಾಗಲೇ ಆದೇಶ ನೀಡಿದ್ದು ಕಾರ್ಯಕ್ರಮ ಪ್ರಗತಿಯಲ್ಲಿದೆ ಎಂದು ತಿಳಿಸಿ, ಸದರಿ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ 66 ಅಧಿಕಾರಿ/ಸಿಬ್ಬಂದಿ ವರ್ಗದವರಿಗೆ ತಲಾ ಒಂದರಂತೆ ಗಣಕ ಯಂತ್ರವನ್ನು ಒದಗಿಸಲು, ಹಾಗೂ ಹೀಗೆ ಒದಗಿಸುವಾಗ ನೆಟ್‌ವರ್ಕಿಂಗ್, ಸರ್ವರ್, ಯುಪಿಎಸ್‌ಗಳ ಸಾಮರ್ಥ್ಯವನ್ನು ಹೆಚ್ಚಿಸುವ ಅನಿವಾರ್ಯವಿರುತ್ತದೆ ಹಾಗೂ ಈ ಸಂಬಂಧ ತಾಂತ್ರಿಕ ಸಲಹಾ ಸಮಿತಿಯ ಮುಂದೆ ಕಛೇರಿಗೆ ಅಗತ್ಯವಿರುವ ಹೆಚ್ಚುವರಿ ಗಣಕ ಯಂತ್ರಗಳ ಖರೀದಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಲ್ಲಿಸಲಾಗಿದೆ ಎಂದು ತಿಳಿಸುತ್ತಾ, ಈ ಸಂಬಂಧ ಅಂದಾಜು 11.06 ಲಕ್ಷ ರೂ.ಗಳ ಅಗತ್ಯವಿರುವುದರಿಂದ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 5 ಎಂ.ಪಿ.ಇ. 2008, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008.**

**(ಇಡಿ 28 ಸ್ವೀಮರ(ಯುನಿಕ್) 2008, ದಿನಾಂಕ 13-2-2008)**

(3) ಡಿ.ಎಸ್.ಇ.ಆರ್.ಟಿ. ಕಛೇರಿಯಲ್ಲಿ ಎಲ್.ಪಿ.ಓ. ತಂತ್ರಾಂಶವನ್ನು ಅನುಷ್ಠಾನಗೊಳಿಸಲು, ನೆಟ್‌ವರ್ಕಿಂಗ್, ಸರ್ವರ್, ಯುಪಿಎಸ್‌ಗಳ ಸಾಮರ್ಥ್ಯವನ್ನು ಹೆಚ್ಚಿಸುವ ಸಲುವಾಗಿ, ಈ ಹಿಂದಿನ ತಾಂತ್ರಿಕ ಸಲಹಾ ಸಮಿತಿಯು ನಿಗಧಿಪಡಿಸಿರುವ ಕಾನ್ಫಿಗರೇಷನ್‌ಗಳನ್ನು ಪಾಲಿಸುವ ಹಾಗೂ ಪ್ರಚಲಿತವಿರುವ ಎಲ್ಲಾ ಖರೀದಿ ನಿಯಮಗಳನ್ನು ಕಡ್ಡಾಯವಾಗಿ ಪಾಲಿಸುವ ಷರತ್ತುಗಳನ್ನು ವಿಧಿಸಿ 2007-08ನೇ ಸಾಲಿಗೆ ಮಾಹಿತಿ ಸಿಂಧು ಯೋಜನೆಗೆ ಲೆಕ್ಕಶೀರ್ಷಿಕೆ 2202-80-800-0-26 (ಯೋಜನೆ)ಯಡಿ ಒದಗಿಸಲಾಗಿರುವ 2300.00 ಲಕ್ಷ ರೂ.ಗಳ (ಎರಡು ಸಾವಿರದ ಮುನ್ನೂರು ಲಕ್ಷಗಳು ಮಾತ್ರ) ಅನುದಾನದ ಮಿತಿಯೊಳಗೆ 10.00 ಲಕ್ಷ ರೂ.ಗಳನ್ನು (ಹತ್ತು ಲಕ್ಷ ರೂಪಾಯಿಗಳು ಮಾತ್ರ) ಬಳಸಿಕೊಳ್ಳಲು ರಾಜ್ಯ ಶಿಕ್ಷಣ ತರಬೇತಿ ಮತ್ತು ಸಂಶೋಧನೆ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಲಾಗಿದೆ.

(4) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾರ್ಯಕ್ರಮದ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾರ್ಯಕ್ರಮದ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ 197 ಐಎಫ್(ಬಿಎ) 2008/ ದಿನಾಂಕ 7–2–2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 384

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** 2007–08ನೇ ಸಾಲಿಗೆ ಹೊಸ ಯೋಜನೆಗಳಡಿ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಸರ್ಕಾರದ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಪತ್ರ ಸಂಖ್ಯೆ: ಡಿ.ಟಿ.ಇ. 144–ಡಿವಿಪಿ(1) 2006/2087/ ದಿನಾಂಕ 1–12–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು 2007–08ನೇ ಸಾಲಿಗೆ ಹೊಸ ಯೋಜನೆಗಳಡಿ ವಿವಿಧ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ 21 ಹೊಸ ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ಪ್ರಾರಂಭಿಸುವ ಸಲುವಾಗಿ ಲೆಕ್ಕಶೀರ್ಷಿಕೆ 2203–00–105–0–01 (ಯೋಜನೆ) ಅಡಿಯಲ್ಲಿ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗಾಗಿ, 800.00 ಲಕ್ಷ ರೂ.ಗಳು ಹಾಗೂ ಲೆಕ್ಕಶೀರ್ಷಿಕೆ 4202–02–104–1–01 (ಯೋಜನೆ) ಅಡಿಯಲ್ಲಿ ಪೂರಕ ಆಯವ್ಯಯದಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡಗಳಿಗಾಗಿ 1000.00 ಲಕ್ಷ ರೂ.ಗಳನ್ನು ಹೀಗೆ ಒಟ್ಟು 1800.00 ಲಕ್ಷ ರೂ.ಗಳನ್ನು ಒದಗಿಸಿದ್ದು, ನಿಗಧಿಪಡಿಸಿರುವ ಮೊತ್ತದಲ್ಲಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಅದರ ವಿವರ ಈ ಕೆಳಕಂಡಂತಿದೆ. ಅದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

| ಕ್ರ. ಸಂ. | ಮುಂದುವರಿಕೆ ಕಾರ್ಯಕ್ರಮದ ಹೆಸರು ಮತ್ತು ಆಯವ್ಯಯ ಲೆಕ್ಕಶೀರ್ಷಿಕೆ | ಒದಗಿಸಿಕೊಳ್ಳಲಾದ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಯೋಜನೆಯಡಿ ಹೊಸ 21 ಸರ್ಕಾರಿ ಪಾಲಿಟೆಕ್ನಿಕ್‌ಗಳಲ್ಲಿ ಮಂಜೂರಾಗಿರುವ ಹುದ್ದೆಗಳಿಗೆ ವೇತನ ವೆಚ್ಚ ಭರಿಸಲು | 42.00 |
| 2 | ಸದರಿ ಪಾಲಿಟೆಕ್ನಿಕ್‌ಗಳಿಗೆ ಯಂತ್ರೋಪಕರಣ ಹಾಗೂ ಗಣಕಯಂತ್ರ ಮತ್ತು ಸಾಫ್ಟ್‌ವೇರ್ ಖರೀದಿಸಲು | 560.75 |
| 3 | ಸದರಿ ಪಾಲಿಟೆಕ್ನಿಕ್‌ಗಳಿಗೆ ಪೀಠೋಪಕರಣ ಖರೀದಿಸಲು | 150.00 |
| 4 | ಸದರಿ ಪಾಲಿಟೆಕ್ನಿಕ್‌ಗಳಿಗೆ ಪುಸ್ತಕ ಖರೀದಿಸಲು | 42.00 |
| 5 | ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗೆ ತರಬೇತಿ ಕಾರ್ಯಕ್ರಮ ಏರ್ಪಡಿಸಲು | 5.25 |
| 6 | ಯೋಜನೆಯಡಿ ಹೊಸ 21 ಸರ್ಕಾರಿ ಪಾಲಿಟೆಕ್ನಿಕ್‌ಗಳ ಪೈಕಿ 4 ಪಾಲಿಟೆಕ್ನಿಕ್‌ಗಳಾದ ಮಿರ್ಲೆ, ರಾಮನಗರ, ಬೇಲೂರು ಮತ್ತು ಹೊಳೆನರಸೀಪುರಗಳಲ್ಲಿ ಕಟ್ಟಡ ನಿರ್ಮಾಣ ವೆಚ್ಚ ಭರಿಸಲು | 960.00 |
| | **ಒಟ್ಟು** | **1760.00** |

(4) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 174 ಯೋಯೋಕ 2007, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

**(ಇಡಿ 91 ಸ್ವೀಮರ (ಯುನಿಕ್) 2008, ದಿನಾಂಕ 15–3–2008)**

(5) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2203–00–105–0–01 (ಯೋಜನೆ) ಅಡಿ ಸರ್ಕಾರಿ ಪಾಲಿಟೆಕ್ನಿಕ್‌ಗಳಿಗಾಗಿ ಒದಗಿಸಿರುವ 800.00 ಲಕ್ಷ ರೂ.ಗಳಲ್ಲಿ 200.00 ಲಕ್ಷ ರೂ.ಗಳನ್ನು (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ) ಮತ್ತು ಲೆಕ್ಕಶೀರ್ಷಿಕೆ 4202–02–104–1–01 (ಯೋಜನೆ) ಯಡಿ ಸರ್ಕಾರಿ ಪಾಲಿಟೆಕ್ನಿಕ್ ಕಟ್ಟಡಗಳಿಗಾಗಿ ಒದಗಿಸಿರುವ 1000.00 ಲಕ್ಷ ರೂ.ಗಳಲ್ಲಿ, 200.00 ಲಕ್ಷ ರೂ.ಗಳನ್ನು (ಇನ್ನೂರು ಲಕ್ಷ ರೂಪಾಯಿಗಳು ಮಾತ್ರ) ಪ್ರಸ್ತಾಪಿಸಿರುವ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ವಾಸ್ತವ ಪ್ರಗತಿಯಾದಲ್ಲಿ ಮಾತ್ರ ಉಪಯೋಗಿಸಿಕೊಳ್ಳಲು ಈ ಕೆಳಕಂಡ ಷರತ್ತನ್ನು ವಿಧಿಸಿ ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಅನುಮತಿ ನೀಡಲಾಗಿದೆ.

**ಷರತ್ತುಗಳು:**

- ಉಪಕರಣಗಳ ಹಾಗೂ ಇತರೆ ಸಾಮಗ್ರಿ ಖರೀದಿ ಹಾಗೂ ಕಟ್ಟಡಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ನಿಯಮಾನುಸಾರ ಕೆ.ಟಿ.ಪಿ.ಪಿ. ಕಾಯ್ದೆ ಪ್ರಕಾರ ಪಾಲಿಸಿ ಕ್ರಮ ಕೈಗೊಳ್ಳತಕ್ಕದ್ದು.
- ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯಿಂದ ಕೈಗೊಳ್ಳತಕ್ಕದ್ದು.

(6) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿ.ಇ. 01 ಐ.ಎಫ್.(ಬಿ.ಎ.) 2007/ ದಿನಾಂಕ 4–1–2008 ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 41 ವೆಚ್ಚ–8/ 08/ ದಿನಾಂಕ 23–2–2008 ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 556

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಐ.ಸಿ.ಟಿ. ಫೇಸ್–2ರಲ್ಲಿ ರಾಜ್ಯದ 1571 ಸರ್ಕಾರಿ ಪ್ರೌಢಶಾಲೆಗಳು ಮತ್ತು 708 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಗಣಕ ಶಿಕ್ಷಣ ಒದಗಿಸಲು ದರ ವ್ಯವಹಾರ ನಿರ್ಧರಣಾ ಸಮಿತಿ ರಚನೆ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರ ಏಕ ಕಡತ ಸಂ. ಇ.ಟಿ.ಸಿ2/ಐ.ಸಿ.ಟಿ–ಫೇಸ್–2/1/07–08, ದಿನಾಂಕ 1–2–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರು ಐ.ಸಿ.ಟಿ. ಫೇಸ್–2ನಲ್ಲಿ ರಾಜ್ಯದ 1571 ಸರ್ಕಾರಿ ಪ್ರೌಢಶಾಲೆಗಳು ಮತ್ತು 708 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಗಣಕ ಹಾಗೂ ಗಣಕಾಧಾರಿತ ಶಿಕ್ಷಣ ಒದಗಿಸಲು ಈಗಾಗಲೇ ಟೆಂಡರ್ ಕರೆಯಲಾಗಿದ್ದು, ಟೆಂಡರ್‌ನಲ್ಲಿ ಎಲ್1 ಆಗಿ ಆಯ್ಕೆಯಾಗಿರುವ ಸಂಸ್ಥೆಗಳೊಂದಿಗೆ ದರ ವ್ಯವಹಾರ ನಿರ್ಧರಿಸಲು ದರ ವ್ಯವಹಾರ ನಿರ್ಧರಣಾ ಸಮಿತಿಯನ್ನು (Price Negotiation Committee) ರಚಿಸಲು ಸರ್ಕಾರವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 6 ಎಂಪಿಇ 2008, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2008.**

**(ಇಡಿ 30 ಸ್ವೀಮರ (ಯುನಿಕ್) 2008, ದಿನಾಂಕ 16–2–2008)**

(3) ರಾಜ್ಯದ 1571 ಸರ್ಕಾರಿ ಪ್ರೌಢಶಾಲೆಗಳು ಮತ್ತು 708 ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ಗಣಕ ಹಾಗೂ ಗಣಕ ಆಧಾರಿತ ಶಿಕ್ಷಣ ಒದಗಿಸಲು ಪ್ಯಾಕೇಜ್ ಸಂ. 1, 2ನ್ನು ಹೊರತುಪಡಿಸಿ ಉಳಿದ ಪ್ಯಾಕೇಜ್‌ಗಳಿಗೆ ಎಲ್1 ಆಗಿ ಆಯ್ಕೆಯಾಗಿರುವ ಸಂಸ್ಥೆಗಳೊಂದಿಗೆ ದರ ವ್ಯವಹಾರ ನಿರ್ಧರಿಸಲು ಈ ಕೆಳಕಂಡವರನ್ನೊಳಗೊಂಡಂತೆ ದರ ವ್ಯವಹಾರ ನಿರ್ಧರಣಾ ಸಮಿತಿಯನ್ನು (Price Negotiation Committee) ರಚಿಸಿದೆ.

| | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು,<br>ಶಿಕ್ಷಣ ಇಲಾಖೆ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು,<br>ಇ–ಆಡಳಿತ, ಸಿ.ಆ.ಸು.ಇ. (ಆಡಳಿತ ಸುಧಾರಣೆ) | ಸದಸ್ಯರು |
| 3. | ಸರ್ಕಾರದ ಕಾರ್ಯದರ್ಶಿಗಳು,<br>ಆರ್ಥಿಕ ಇಲಾಖೆ (ವೆಚ್ಚಗಳು) | ಸದಸ್ಯರು |
| 4. | ಪ್ರೊ. ವೇಣಿಮಾಧವನ್,<br>ಶಿಕ್ಷಣ ಇಲಾಖೆಯ ತಾಂತ್ರಿಕ ಸಲಹಾ ಸಮಿತಿ ಸದಸ್ಯರು | ಸದಸ್ಯರು |
| 5. | ಪ್ರೊ. ರಾಜಾರಾಮನ್<br>ಶಿಕ್ಷಣ ಇಲಾಖೆಯ ತಾಂತ್ರಿಕ ಸಲಹಾ ಸಮಿತಿ ಸದಸ್ಯರು | ಸದಸ್ಯರು |
| 6. | ಪ್ರೊ. ಬಿ.ಕೆ. ಸುಬ್ರಮಣಿಯನ್,<br>ನಿವೃತ್ತ ಪ್ರಾಧ್ಯಾಪಕರು, ಐ.ಐ.ಎಸ್.ಸಿ., ಬೆಂಗಳೂರು | ಸದಸ್ಯರು |
| 7. | ಆಯುಕ್ತರು,<br>ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |
| 8. | ಆಯುಕ್ತರು,<br>ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು | ಸದಸ್ಯರು |

9. ಪ್ರೊ. ವಿ. ವೆಂಕಟೇಶನ್ ಸದಸ್ಯರು
ಹಿರಿಯ ಮಾಹಿತಿ ಅಧಿಕಾರಿಗಳು,
ರಾಷ್ಟ್ರೀಯ ಮಾಹಿತಿ ಕೇಂದ್ರ, ಬೆಂಗಳೂರು

10. ನಿರ್ದೇಶಕರು, ಸಂಚಾಲಕರು
ರಾಜ್ಯ ಶಿಕ್ಷಣ ತರಬೇತಿ ಮತ್ತು ಸಂಶೋಧನೆ ಇಲಾಖೆ

(4) ಮೇಲ್ಕಂಡ ಸದಸ್ಯರನ್ನೊಳಗೊಂಡ ಸಮಿತಿಯು ಪ್ಯಾಕೇಜ್ ಸಂಖ್ಯೆ 1,2ನ್ನು ಹೊರತುಪಡಿಸಿ ಉಳಿದ ಪ್ಯಾಕೇಜ್‌ಗಳ ಎಲ್1 ಸಂಸ್ಥೆಗಳೊಂದಿಗೆ ವ್ಯವಹರಿಸಿ (Negotiate) ತನ್ನ ಶಿಫಾರಸ್ಸುಗಳೊಂದಿಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸುವಂತೆ ಸೂಚಿಸಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 355

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** 2007–08ನೇ ಸಾಲಿಗೆ ಅನುದಾನಕ್ಕೆ ಒಳಪಟ್ಟ ಖಾಸಗಿ ಪ್ರೌಢ ಶಾಲೆಗಳಿಗೆ ಸಹಾಯಾನುದಾನ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಲೆಕ್ಕಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ಶಿವಮೊಗ್ಗ ರವರ ಪತ್ರ ಸಂಖ್ಯೆ: ಜಿ.ಪಂ.ಶಿ.ಬ–2: ಬ.ಅ.ದಾ: 07–08/ ದಿನಾಂಕ 21–11–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಲೆಕ್ಕಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ರವರು, 2007–08ನೇ ಸಾಲಿಗೆ ಶಿವಮೊಗ್ಗ ಜಿಲ್ಲೆಯ ಡಾ: ಅಂಬೇಡ್ಕರ್ ಪ್ರೌಢಶಾಲೆ, ಚಿಕ್ಕಶಕುನ, ಸೊರಬ ತಾಲ್ಲೂಕು, ಬಸವೇಶ್ವರ ಪ್ರೌಢಶಾಲೆ, ಅಗ್ರಹಾರ ಮುಚುಡಿ, ಶಿಕಾರಿಪುರ ತಾಲ್ಲೂಕು, ಸೇವಾಲಾಲ್ ಪ್ರೌಢಶಾಲೆ, ಗಿಣಿವಾಲ, ಸೊರಬ ತಾಲ್ಲೂಕು, ಅಶೋಕ ಪ್ರೌಢಶಾಲೆ, ಹೀಗೆ ನಾಲ್ಕು ಖಾಸಗಿ ಪ್ರೌಢಶಾಲೆಗಳನ್ನು ಅನುದಾನಕ್ಕೆ ಒಳಪಡಿಸಿದ್ದು, ಸದರಿ ಶಾಲೆಗಳಿಗೆ ವೇತನಾನುದಾನ ನೀಡುವ ಬಗ್ಗೆ ಹೊಸದಾಗಿ ಅನುದಾನಕ್ಕೆ ಒಳಪಟ್ಟ ಅನುದಾನಿತ ಪ್ರೌಢಶಾಲೆಗಳ ಮಂಜೂರಾತಿಗೆ ಯಾವುದೇ ಲೆಕ್ಕಶೀರ್ಷಿಕೆ ಇಲ್ಲದಿರುವುದರಿಂದ ಈ ಶಾಲೆಗಳ ಉಪಾಧ್ಯಾಯರುಗಳಿಗೆ ವೇತನ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 62 ಯೋಯೋಕ 2008, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2008.**
**(ಇಡಿ 55 ಸ್ಕೀಮರ (ಯುನಿಕ್) 2008, ದಿನಾಂಕ 26–2–2008)**

(3) 2007–08ನೇ ಸಾಲಿಗೆ ಅನುದಾನಕ್ಕೆ ಒಳಪಟ್ಟ ಶಿವಮೊಗ್ಗ ಜಿಲ್ಲೆಯ ಡಾ. ಅಂಬೇಡ್ಕರ್ ಪ್ರೌಢಶಾಲೆ, ಚಿಕ್ಕಶಕುನ, ಸೊರಬ ತಾಲ್ಲೂಕು, ಬಸವೇಶ್ವರ ಪ್ರೌಢಶಾಲೆ, ಅಗ್ರಹಾರ ಮುಚುಡಿ, ಶಿಕಾರಿಪುರ ತಾಲ್ಲೂಕು, ಸೇವಾಲಾಲ್ ಪ್ರೌಢಶಾಲೆ, ಗಿಣಿವಾಲ, ಸೊರಬ ತಾಲ್ಲೂಕು, ಅಶೋಕ ಪ್ರೌಢಶಾಲೆಯ ತಲಾ ಏಳು ಬೋಧಕ ಮತ್ತು ಒಂದು ಬೋಧಕೇತರ ಹುದ್ದೆಗಳಿಗೆ ವೇತನ ನೀಡುವ ಸಲುವಾಗಿ ಪ್ರಧಾನ ಲೆಕ್ಕಶೀರ್ಷಿಕೆ 2202–02–196–1–01 (ಯೋಜನೆ) ಯಡಿ ಅನುಬಂಧದಲ್ಲಿ ತೋರಿಸಿರುವಂತೆ 29.77 ಲಕ್ಷ ರೂ.ಗಳನ್ನು (ಇಪ್ಪತ್ತೊಂಭತ್ತು ಲಕ್ಷದ ಎಪ್ಪತ್ತೇಳು ಸಾವಿರ ರೂ.ಗಳು ಮಾತ್ರ ಮರು ಹಂಚಿಕೆ ಮಾಡಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ರವರಿಗೆ ಅನುಮೋದನೆ ನೀಡಲಾಗಿದೆ.

(4) ಬಿಡುಗಡೆ ಮಾಡಿರುವ ಮೊತ್ತವನ್ನು ವೇತನ ನೀಡುವ ಉದ್ದೇಶಕ್ಕಾಗಿಯೇ ಬಳಸತಕ್ಕದ್ದು.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ ಶಿ.ಇ. 308 ಐ.ಎಫ್. (ಬಿ.ಎ) 2008/ ದಿನಾಂಕ 25–2–2008ರಲ್ಲಿನ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆ.ಇ. 1264: ವೆಚ್ಚ–8/07/ ದಿನಾಂಕ 7–2–08ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 401

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ದಿನಾಂಕ 1–6–1987ರ ಪೂರ್ವದ ಶಾಲೆಗಳಾದ ಶ್ರೀ ಉಜ್ಜಯಿನಿ ಜಗದ್ಗುರು ಸಿದ್ದೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಬಂಡಿಮೋಟು, ಬಳ್ಳಾರಿ ಹಾಗೂ ಡಾ: ಅಂಬೇಡ್ಕರ್ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಕೊರಚಗೇರಿ, ಬಳ್ಳಾರಿ ಈ ಶಾಲೆಗಳ ಶಿಕ್ಷಕರಿಗೆ ಬಾಕಿ ವೇತನಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿ ರವರ ಪತ್ರ ಸಂಖ್ಯೆ: ಜಿ.ಪಂ.ಶಿ: ಬ–ಸಿ8/ಶಿಕ್ಷಣ/83/2007–08, ದಿನಾಂಕ 21–1–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಬಳ್ಳಾರಿರವರು, ದಿನಾಂಕ 1–6–1987ರ ಪೂರ್ವದ ಶಾಲೆಗಳಾದ ಶ್ರೀ ಉಜ್ಜಯಿನಿ ಜಗದ್ಗುರು ಸಿದ್ದೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಬಂಡಿಮೋಟು, ಬಳ್ಳಾರಿ ಹಾಗೂ ಡಾ: ಅಂಬೇಡ್ಕರ್ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಕೊರಚಗೇರಿ, ಬಳ್ಳಾರಿ ಈ ಶಾಲೆಗಳಲ್ಲಿ ಕ್ರಮವಾಗಿ ಸರ್ಕಾರದ ಆದೇಶ ಸಂಖ್ಯೆ ಇಡಿ 344 ಪಿಎಂಸಿ 2006, ದಿನಾಂಕ 21–3–2007ರಂತೆ 15 ಅನುಮೋದಿತ ಶಿಕ್ಷಕರು ಹಾಗೂ ಆದೇಶ ಸಂಖ್ಯೆ ಇಡಿ 344 ಪಿಎಂಸಿ 2006 ದಿನಾಂಕ 29–5–2007ರಂತೆ ಒಟ್ಟು 11 ಅನುಮೋದಿತ ಶಿಕ್ಷಕರು ಒಟ್ಟು 26 ಅನುಮೋದಿತ ಶಿಕ್ಷಕರು ದಿನಾಂಕ 1–1–2003 ರಿಂದ 21–11–2005ರವರೆಗೆ ಸಕ್ರಮವಾಗಿ ಕಾರ್ಯ ನಿರ್ವಹಿಸಿದ್ದು, ಅನುದಾನಕ್ಕೊಳಪಟ್ಟಿರುತ್ತಾರೆ ಹಾಗೂ ಸದರಿಯವರು ಈ ಅವಧಿಗೆ ಬಾಕಿ ವೇತನ ಪಡೆಯಲು ಅರ್ಹರಿರುತ್ತಾರೆ ಎಂದು ತಿಳಿಸಿ, ಶ್ರೀ ಉಜ್ಜಯಿನಿ ಜಗದ್ಗುರು ಸಿದ್ದೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಬಂಡಿಮೋಟು, ಬಳ್ಳಾರಿ ಈ ಶಾಲೆಯ 15 ಅನುಮೋದಿತ ಶಿಕ್ಷಕರ ಬಾಕಿ ವೇತನ ಮೊತ್ತ ರೂ. 44,62,108.00 ಮತ್ತು ಡಾ: ಅಂಬೇಡ್ಕರ್ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಕೊರಚಗೇರಿ, ಬಳ್ಳಾರಿ ಈ ಶಾಲೆಯ 11 ಅನುಮೋದಿತ ಶಿಕ್ಷಕರ ಬಾಕಿ ವೇತನದ ಮೊತ್ತ ರೂ. 31,63,897.00 ಹೀಗೆ ಒಟ್ಟು 26 ಅನುಮೋದಿತ ಶಿಕ್ಷಕರ ಒಟ್ಟು ಬಾಕಿ ವೇತನ 76,26,005.00 ರೂ.ಗಳನ್ನು (ಎಪ್ಪತ್ತಾರು ಲಕ್ಷದ ಇಪ್ಪತ್ತಾರು ಸಾವಿರದ ಐದು ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 284 ಯೋಯೋಕ 2007, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2008.**

**(ಇಡಿ 67 ಸ್ವೀಮರ (ಯುನಿಕ್) 2008, ದಿನಾಂಕ 7–3–2008)**

(3) ದಿನಾಂಕ 1–6–1987ರ ಪೂರ್ವದ ಶಾಲೆಗಳಾದ ಶ್ರೀ ಉಜ್ಜಯಿನಿ ಜಗದ್ಗುರು ಸಿದ್ದೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಬಂಡಿಮೋಟು, ಬಳ್ಳಾರಿ ಈ ಶಾಲೆಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 344 ಪಿಎಂಸಿ 2006, ದಿನಾಂಕ 21–3–2007ರಂತೆ 15 ಅನುಮೋದಿತ ಶಿಕ್ಷಕರ ಬಾಕಿ ವೇತನ ಮೊತ್ತ 44,62,108.00 ರೂ.ಗಳು (ನಲವತ್ತನಾಲ್ಕು ಲಕ್ಷದ ಅರವತ್ತೆರಡು ಸಾವಿರದ ಒಂದು ನೂರಾ ಎಂಟು ರೂಪಾಯಿಗಳು ಮಾತ್ರ) ಹಾಗೂ ಡಾ: ಅಂಬೇಡ್ಕರ್ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಕೊರಚಗೇರಿ, ಬಳ್ಳಾರಿ ಈ ಶಾಲೆಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 344 ಪಿಎಂಸಿ 2006, ದಿನಾಂಕ 29–5–2007ರಂತೆ 11 ಅನುಮೋದಿತ ಶಿಕ್ಷಕರ ಬಾಕಿ ವೇತನದ ಮೊತ್ತ 31,63,897.00 ರೂ.ಗಳು (ಮೂವತ್ತೊಂದು ಲಕ್ಷದ ಅರವತ್ತ ಮೂರು ಸಾವಿರದ ಎಂಟುನೂರಾ ತೊಂಭತ್ತೇಳು ರೂಪಾಯಿಗಳು ಮಾತ್ರ) ಹೀಗೆ ಒಟ್ಟು 26 ಅನುಮೋದಿತ ಶಿಕ್ಷಕರ ಒಟ್ಟು ಬಾಕಿ ವೇತನ 76.26 ಲಕ್ಷ ರೂ.ಗಳನ್ನು (ಎಪ್ಪತ್ತಾರು ಲಕ್ಷದ ಇಪ್ಪತಾರು ಸಾವಿರ ರೂಪಾಯಿಗಳನ್ನು ಮಾತ್ರ) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 2202–01–102–0–01(ಯೋಜನೇತರ) ಯಡಿಯಲ್ಲಿ ಉಳಿತಾಯವಾಗಲಿರುವ 96.41 ಲಕ್ಷ ರೂಪಾಯಿಗಳಲ್ಲಿ (ತೊಂಭತ್ತಾರು ಲಕ್ಷದ ನಲವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಭರಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಬಳ್ಳಾರಿ ಜಿಲ್ಲಾ ಪಂಚಾಯತ್ ಬಳ್ಳಾರಿ ರವರಿಗೆ ಅನುಮೋದನೆ ನೀಡಲಾಗಿದೆ. ಈ ಶಿಕ್ಷಕರುಗಳಿಗೆ ಬಾಕಿ ಹಣವನನು ಬಿಡುಗಡೆ ಮಾಡುವಾಗ ಈಗಾಗಲೇ ನೀಡಲಾಗಿರುವ ಹಣವನ್ನು ಕಟಾಯಿಸಿ ಬಾಕಿ ಮಾತ್ರ ನೀಡತಕ್ಕದ್ದು.

(4) ಬಿಡುಗಡೆ ಮಾಡಿರುವ ಮೊತ್ತವನ್ನು ವೇತನ ಬಾಕಿ ಪಾವತಿ ನೀಡುವ ಉದ್ದೇಶಕ್ಕಾಗಿಯೇ ಬಳಸತಕ್ಕದ್ದು.

(5) ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ. 651 ಐ.ಎಫ್. (ಬಿ.ಎ.) 2007, ದಿನಾಂಕ 23–8–2007ರಲ್ಲಿನ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆ.ಇ. 148 ವೆಚ್ಚ–8/08/ ದಿನಾಂಕ 26–2–2008ರಲ್ಲಿನ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 431

**ಐ.ಎಫ್. ಮಾಗಿ**

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಹಾವೇರಿ ಜಿಲ್ಲೆ ಶಿಗ್ಗಾಂವ್, ಬಿಜಾಪುರ ಜಿಲ್ಲೆ ಮುದ್ದೇಬಿಹಾಳ, ಬೆಳಗಾಂ ಜಿಲ್ಲೆ ರಾಮದುರ್ಗ ಮತ್ತು ಗದಗ ಜಿಲ್ಲೆ ರೋಣ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 189 ಯೋಸಕ 2007, ದಿನಾಂಕ 3–10–2007.
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ.–40–ಯೋಜನೆ–2007–08, ದಿನಾಂಕ 1–2–2008.
3. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ.–55–ಯೋಜನೆ–2000–01, ದಿನಾಂಕ 1–2–2008.
4. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ.–11–ಯೋಜನೆ–2000–01, ದಿನಾಂಕ 1–2–2008.
5. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ.–41–ಯೋಜನೆ–2000–01, ದಿನಾಂಕ 1–2–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–01–203–1–01 ರಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡದ ಹೊಸ ಕಾಮಗಾರಿಗೆ ಮತ್ತು ಮುಂದುವರಿಕೆ ಕಾಮಗಾರಿಗಳಿಗಾಗಿ ಒಟ್ಟು 22.9151 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

(2) ಮೇಲೆ ಓದಲಾದ (2) ಮತ್ತು (4)ರ ಪತ್ರಗಳಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, 2007–08ನೇ ಸಾಲಿಗೆ ಓದಲಾದ (1)ರ ಆದೇಶದಲ್ಲಿ ಹಾವೇರಿ ಜಿಲ್ಲೆ ಶಿಗ್ಗಾಂವ್, ಬಿಜಾಪುರ ಜಿಲ್ಲೆ ಮುದ್ದೇಬಿಹಾಳ, ಬೆಳಗಾಂ ಜಿಲ್ಲೆ ರಾಮದುರ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗಳಿಗೆ ತಲಾ 22.50 ಲಕ್ಷ ರೂ.ಗಳನ್ನು ಮತ್ತು ಮೇಲೆ ಓದಲಾದ (5)ರ ಪತ್ರದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, 2007–08ನೇ ಸಾಲಿಗೆ ಗದಗ ಜಿಲ್ಲೆ ರೋಣ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50.00 ಲಕ್ಷ ರೂ.ಗಳನ್ನು ಅಪೆಂಡಿಕ್ಸ್–ಇ ನಡಿ ಒದಗಿಸಿರುವುದರಿಂದ ಎಲಾ ಕಾಮಗಾರಿಗಳಿಗೂ ತಲಾ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಯನ್ನು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಧಾರವಾಡರವರಿಂದ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 8 ಯೋಸಕ 2008(ಭಾಗ) ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2008.**

**(ಇಡಿ 82 ಸ್ವೀಮರ (ಯುನಿಕ್) 2007, ದಿನಾಂಕ 14–3–2008)**

(4) 2007–08ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣದ ಮುಂದುವರಿಕೆ ಕಾಮಗಾರಿ ಮತ್ತು ನೂತನವಾಗಿ ಪ್ರಾರಂಭಿಸಲಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಲೆಕ್ಕಶೀರ್ಷಿಕೆ 4202–01–203–1–01 (ಯೋಜನೆ)ಯಡಿ ಬಿಡುಗಡೆ ಮಾಡಿರುವ 22.9151 ಕೋಟಿ ರೂ.ಗಳಲ್ಲಿ (ಇಪ್ಪತ್ತೆರಡು ಕೋಟಿ ತೊಂಭತ್ತೊಂದು ಲಕ್ಷದ ಐವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ಹಾವೇರಿ ಜಿಲ್ಲೆ, ಶಿಗ್ಗಾಂವ್, ಬಿಜಾಪುರ ಜಿಲ್ಲೆ ಮುದ್ದೇಬಿಹಾಳ, ಬೆಳಗಾಂ ಜಿಲ್ಲೆ ರಾಮದುರ್ಗ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗಳಿಗೆ ತಲಾ 22.50 ಲಕ್ಷ ರೂ.ಗಳನ್ನು ಒದಗಿಸಿರುವುದರಿಂದ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಮತ್ತು ಗದಗ ಜಿಲ್ಲೆ ರೋಣ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಅಪೆಂಡಿಕ್ಸ್–ಇ ನಡಿ ಒದಗಿಸಿರುವುದರಿಂದ ಆ ಕಾಲೇಜಿನ ಕಟ್ಟಡ ಕಾಮಗಾರಿಯ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಕಾಮಗಾರಿಯನ್ನು ಕರ್ನಾಟಕ ಪಾರದರ್ಶಕ ಕಾಯ್ದೆಯನ್ವಯ ಪ್ರಚಲಿತವಿರುವ ಎಲ್ಲಾ ನಿಯಮಗಳನ್ನು ಚಾಚೂ ತಪ್ಪದೇ ಪಾಲಿಸುವ ಷರತ್ತನ್ನು ವಿಧಿಸಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರುರವರಿಗೆ ಅನುಮತಿ ನೀಡಲಾಗಿದೆ.

(5) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–01–203–1–01 (ಯೋಜನೆ)ಯಡಿಯಲ್ಲಿ ಹಾಗೂ ಅಪೆಂಡಿಕ್ಸ್–ಇ ನಡಿ ಸದರಿ ಕಾಮಗಾರಿಗಳಿಗೆ ಬಿಡುಗಡೆ ಮಾಡಿರುವ ಅನುದಾನವನ್ನು ಉಪಯೋಗಿಸಿಕೊಂಡು ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(6) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(7) ಸದರಿ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ: ಯೋಇ 37 ಜಶ 2007, ದಿನಾಂಕ 17–4–2007 ಹಾಗೂ ಆ.ಇ. 421 ವೆಚ್ಚ–8, 2007, ದಿನಾಂಕ 23–4–2007ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 312 ಐ.ಎಫ್.(ಬಿ.ಎ.) 2008, ದಿನಾಂಕ 26–2–2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 482

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ತುಮಕೂರು ಜಿಲ್ಲೆ ತಿಪಟೂರು ಮತ್ತು ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ಮತ್ತು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಇಡಿ 189 ಯೋಸಕ 2007, ದಿನಾಂಕ 3–10–2007.
2. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ.–15–ಯೋಜನೆ–2007–08, ದಿನಾಂಕ 22–2–2008.
3. ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕಾ.ಶಿ.ಇ–80–ಯೋಜನೆ–2000–01, ದಿನಾಂಕ 5–2–2008.

**ಪ್ರಸ್ತಾವನೆ :**

(1) ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–01–203–1–01 ರಡಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡದ ಹೊಸ ಕಾಮಗಾರಿಗೆ ಮತ್ತು ಮುಂದುವರಿಕೆ ಕಾಮಗಾರಿಗಳಿಗಾಗಿ ಒಟ್ಟು 22.9151 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

(2) ಮೇಲೆ ಓದಲಾದ (2) ಮತ್ತು (3)ರ ಪತ್ರಗಳಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ, ಬೆಂಗಳೂರುರವರು, 2007–08ನೇ ಸಾಲಿಗೆ ಓದಲಾದ (1)ರ ಆದೇಶದಲ್ಲಿ ತುಮಕೂರು ಜಿಲ್ಲೆ ತಿಪಟೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಮತ್ತು ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಒದಗಿಸಿರುವುದರಿಂದ 75.00 ಲಕ್ಷ ರೂ.ಗಳ ಅಂದಾಜು ಪಟ್ಟಿಯನ್ನು ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ಉತ್ತರ) ಬೆಂಗಳೂರುರವರಿಂದ ಪಡೆದು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 8 ಯೋಸಕ 2008 (ಭಾಗ) ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2008.**
**(ಇಡಿ 85 ಸ್ವೀಮರ (ಯುನಿಕ್) 2008, ದಿನಾಂಕ 14–3–2008)**

(4) 2007–08ನೇ ಸಾಲಿಗೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣದ ಮುಂದುವರಿಕೆ ಕಾಮಗಾರಿ ಮತ್ತು ನೂತನವಾಗಿ ಪ್ರಾರಂಭಿಸಲಾಗಿರುವ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಲೆಕ್ಕಶೀರ್ಷಿಕೆ 4202–01–203–1–01 (ಯೋಜನೆ)ಯಡಿ ಬಿಡುಗಡೆ ಮಾಡಿರುವ 22.9151 ಕೋಟಿ ರೂ.ಗಳಲ್ಲಿ (ಇಪ್ಪತ್ತೆರಡು ಕೋಟಿ ತೊಂಭತ್ತೊಂದು ಲಕ್ಷದ ಐವತ್ತೊಂದು ಸಾವಿರ ರೂಪಾಯಿಗಳು ಮಾತ್ರ) ತುಮಕೂರು ಜಿಲ್ಲೆ ತಿಪಟೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಒದಗಿಸಿರುವುದರಿಂದ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂಪಾಯಿಗಳು ಮಾತ್ರ) ಅಂದಾಜು ಪಟ್ಟಿಗೆ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಕುಂದಾಪುರ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಕಟ್ಟಡ ಕಾಮಗಾರಿಗೆ 22.50 ಲಕ್ಷ ರೂ.ಗಳನ್ನು ಒದಗಿಸಿರುವುದರಿಂದ 75.00 ಲಕ್ಷ ರೂ.ಗಳ (ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ಬೆಂಗಳೂರುರವರಿಗೆ ಅನುಮತಿ ನೀಡಲಾಗಿದೆ.

(5) 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ 4202–01–203–1–01 (ಯೋಜನೆ) ಯಡಿಯಲ್ಲಿ ಸದರಿ ಕಾಮಗಾರಿಗೆ ಬಿಡುಗಡೆ ಮಾಡಿರುವ ಅನುದಾನದ ಮಿತಿಯೊಳಗೆ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪ್ರಾರಂಭಿಸಲು ಅನುಮತಿ ನೀಡಲಾಗಿದೆ.

(6) ಪ್ರತಿ ಮಾಹೆಯೂ ಎಂ.ಎಂ.ಆರ್. ವರದಿಯಲ್ಲಿ ಕಾಮಗಾರಿಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು. ಕಾಮಗಾರಿಯ ಗುಣಮಟ್ಟದ ಬಗ್ಗೆ ಇಲಾಖೆಯ ಜವಾಬ್ದಾರಿಯುತ ಅಧಿಕಾರಿಗಳು ಆಗಿಂದ್ದಾಗ್ಗೆ ಪರಿಶೀಲನೆ ನಡೆಸಲು ಆದೇಶಿಸಲಾಗಿದೆ.

(7) ಸದರಿ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ: ಯೋಇ 37 ಜಶ 2007, ದಿನಾಂಕ 17–4–2007 ಹಾಗೂ ಆ.ಇ. 421 ವೆಚ್ಚ–8, 2007, ದಿನಾಂಕ 23–4–2007ರಲ್ಲಿ ನೀಡಿರುವ ಸಹಮತಿಯನ್ವಯ ಹಾಗೂ ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ 420 ಐ.ಎಫ್.(ಬಿಎ) 2008, ದಿನಾಂಕ 12–3–2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 481

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** 2007–08ನೇ ಸಾಲಿಗೆ ಅನುದಾನಕ್ಕೆ ಒಳಪಟ್ಟ ಖಾಸಗಿ ಪ್ರೌಢ ಶಾಲೆಗಳಿಗೆ ಸಹಾಯಾನುದಾನ ನೀಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಲೆಕ್ಕಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ಶಿವಮೊಗ್ಗ ರವರ ಪತ್ರ ಸಂಖ್ಯೆ ಜಿ.ಪಂ.ಶಿ: ಬ–2: ಬ.ಅ.ದಾ: 07–08, ದಿನಾಂಕ 21-11–2007.

**ಪ್ರಸ್ತಾವನೆ :**

(1) ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಲೆಕ್ಕಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ರವರು, 2007–08ನೇ ಸಾಲಿಗೆ ಶಿವಮೊಗ್ಗ ಜಿಲ್ಲೆಯ ಡಾ: ಅಂಬೇಡ್ಕರ್ ಪ್ರೌಢಶಾಲೆ, ಚಿಕ್ಕಶಕುನ, ಸೊರಬ ತಾಲ್ಲೂಕು, ಬಸವೇಶ್ವರ ಪ್ರೌಢಶಾಲೆ, ಅಗ್ರಹಾರ ಮುಚುಡಿ, ಶಿಕಾರಿಪುರ ತಾಲ್ಲೂಕು, ಸೇವಾಲಾಲ್ ಪ್ರೌಢಶಾಲೆ, ಗಿಣಿವಾಲ, ಸೊರಬ ತಾಲ್ಲೂಕು, ಅಶೋಕ ಪ್ರೌಢಶಾಲೆ, ಹೀಗೆ ನಾಲ್ಕು ಖಾಸಗಿ ಪ್ರೌಢಶಾಲೆಗಳನ್ನು ಅನುದಾನಕ್ಕೆ ಒಳಪಡಿಸಿದ್ದು, ಸದರಿ ಶಾಲೆಗಳಿಗೆ ವೇತನಾನುದಾನ ನೀಡುವ ಬಗ್ಗೆ ಹೊಸದಾಗಿ ಅನುದಾನಕ್ಕೆ ಒಳಪಟ್ಟ ಅನುದಾನಿತ ಪ್ರೌಢಶಾಲೆಗಳ ಮಂಜೂರಾತಿಗೆ ಯಾವುದೇ ಲೆಕ್ಕಶೀರ್ಷಿಕೆ ಇಲ್ಲದಿರುವುದರಿಂದ ಈ ಶಾಲೆಗಳ ಉಪಾಧ್ಯಾಯರುಗಳಿಗೆ ವೇತನ ನೀಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿ ಸರ್ಕಾರದ ಆದೇಶವನ್ನು ಕೋರಿರುತ್ತಾರೆ.

(2) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 62 ಯೋಯೋಕ 2008, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2008.**

**(ಇಡಿ 80 ಸ್ವೀಮರ (ಯುನಿಕ್) 2008, ದಿನಾಂಕ 14–3–2008)**

(3) ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಲಿಂಕ್ ಡಾಕ್ಯುಮೆಂಟ್ ಶೀರ್ಷಿಕೆ 2202–01–110–3–51–405 (ಯೋಜನೆ) ಅಡಿಯಲ್ಲಿ 2007–08ನೇ ಸಾಲಿಗೆ ಅನುದಾನಕ್ಕೆ ಒಳಪಟ್ಟ ಶಿವಮೊಗ್ಗ ಜಿಲ್ಲೆಯ ಡಾ: ಅಂಬೇಡ್ಕರ್ ಪ್ರೌಢಶಾಲೆ, ಚಿಕ್ಕಶಕುನ, ಸೊರಬ ತಾಲ್ಲೂಕು, ಬಸವೇಶ್ವರ ಪ್ರೌಢಶಾಲೆ, ಅಗ್ರಹಾರ ಮುಚುಡಿ, ಶಿಕಾರಿಪುರ ತಾಲ್ಲೂಕು, ಸೇವಾಲಾಲ್ ಪ್ರೌಢಶಾಲೆ, ಗಿಣಿವಾಲ, ಸೊರಬ ತಾಲ್ಲೂಕು, ಅಶೋಕ ಪ್ರೌಢಶಾಲೆಯ ತಲಾ ಏಳು ಬೋಧಕ ಮತ್ತು ಒಂದು ಬೋಧಕೇತರ ಹುದ್ದೆಗಳಿಗೆ ವೇತನ ಪಾವತಿಸಲು ಮರು ಹೊಂದಾಣಿಕೆಯ ಮೂಲಕ ಒದಗಿಸಲಾಗಿರುವ ಒಟ್ಟು 29.77 ಲಕ್ಷ ರೂ.ಗಳನ್ನು (ಇಪ್ಪತ್ತೊಂಭತ್ತು ಲಕ್ಷದ ಎಪ್ಪತ್ತೇಳು ಸಾವಿರ ರೂ.ಗಳು ಮಾತ್ರ) ಶಿವಮೊಗ್ಗ ಜಿಲ್ಲಾ ಪಂಚಾಯಿತಿಗೆ ಲೆಕ್ಕಶೀರ್ಷಿಕೆ 2202–02–196–1–01–405 (ಯೋಜನೆ) ಅಡಿಯಲ್ಲಿ ಬಿಡುಗಡೆ ಮಾಡಲಾಗಿದೆ.

(4) ಬಿಡುಗಡೆ ಮಾಡಿರುವ ಮೊತ್ತವನ್ನು ವೇತನ ನೀಡುವ ಉದ್ದೇಶಕ್ಕಾಗಿಯೇ ಬಳಸತಕ್ಕದ್ದು.

(5) ಸದರಿ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿ.ಇ. 308 ಐ.ಎಫ್.(ಬಿ.ಎ.) 2008/ ದಿನಾಂಕ 25–2–2008ರಲ್ಲಿನ ಸಹಮತಿಯನ್ವಯ ಹಾಗೂ ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆ.ಇ. 1264 ವೆಚ್ಚ–8/07, ದಿನಾಂಕ 7–2–2008ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 496

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಸ್ತ್ರೀ ಶಕ್ತಿ ಸ್ವಸಹಾಯಕ ಸಂಘಗಳು ಉತ್ಪಾದಿಸುವ ವಸ್ತುಗಳ ಮಾರಾಟಕ್ಕಾಗಿ ತಾಲ್ಲೂಕು ಮಟ್ಟದಲ್ಲಿ 2007–08ನೇ ಸಾಲಿಗೆ ಮಾರುಕಟ್ಟೆ ಮಳಿಗೆ ಸಂಕೀರ್ಣ ನಿರ್ಮಾಣಕ್ಕೆ ನಿವೇಶನ ಗುರ್ತಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಕಾರ್ಯದರ್ಶಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ದಿನಾಂಕ 18–2–2008ರ ಪತ್ರ.

ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆಯ ಮುಖಾಂತರ ಸಲ್ಲಿಸಲಾಗಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಭಾಲ್ಕಿ ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2001ರಲ್ಲಿ 35,093 ಇದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2021ನೇ ಇಸವಿಗೆ 65,000 ಆಗಬಹುದೆಂದು ಅಂದಾಜಿಸಿ ಮಹಾ ಯೋಜನೆಯನ್ನು ತಯಾರಿಸಲಾಗಿದೆ. ಭಾಲ್ಕಿ ಸ್ತಳೀಯ ಯೋಜನಾ ಪ್ರದೇಶದ ಒಟ್ಟು 1,346 ಹೆಕ್ಟೇರ್ ವಿಸ್ತೀರ್ಣದಲ್ಲಿ 700 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಭಾಲ್ಕಿ ಪಟ್ಟಣದ ಜನಸಂಖ್ಯೆ, ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ, ಯೋಜನಾ ತತ್ವಗಳಿಗನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 9 ರಿಂದ 12 ವರೆಗೆ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಬೆಳವಣಿಗೆಗೆ, ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಭೂಮಿಯನ್ನು ಈ ಕೆಳಗಿನಂತೆ ಕಾಯ್ದಿರಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ ಹಾಗೂ ಮಹಾ ಯೋಜನೆಯನ್ನು ತಯಾರಿಸಲಾಗಿದೆ.

ಭಾಲ್ಕಿ ಪಟ್ಟಣದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 700 ಹೆಕ್ಟೇರ್ ವಿಸ್ತೀರ್ಣದ ಪ್ರದೇಶದಲ್ಲಿ ವಸತಿಗಾಗಿ ಶೇ. 46.73, ವಾಣಿಜ್ಯಕ್ಕೆ ಶೇ. 4.97, ಕೈಗಾರಿಕೆಗಾಗಿ ಶೇ. 4.35, ಸಾರ್ವಜನಿಕ : ಅರೆ ಸಾರ್ವಜನಿಕಕ್ಕೆ ಶೇ. 11.20, ನಾಗರೀಕ ಸೌಲಭ್ಯಕ್ಕಾಗಿ ಶೇ. 0.65, ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ ಶೇ. 10.68 ಹಾಗೂ ಸಾರಿಗೆ ಮತ್ತು ಸಂಪರ್ಕಕ್ಕಾಗಿ ಶೇ. 21.42 ವಿಸ್ತೀರ್ಣವನ್ನು ನಿಗಧಿಪಡಿಸಿ ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತದೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 01 ಗುಅಪ್ರಾ 2008, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2008.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ, ಭಾಲ್ಕಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 374

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ವಿಷಯ :** ಮಡಿಕೇರಿ ಜಿಲ್ಲೆ ವಿರಾಜಪೇಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ಸರ್ಕಾರದ ಅಂತಿಮ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ. ನಅಇ 437 ಮೈಅಪ್ರಾ 2005, ದಿನಾಂಕ 25–1–06.
2. ವಿರಾಜಪೇಟೆ ಪಟ್ಟಣ ಪಂಚಾಯಿತಿಯ ಪತ್ರ ಸಂಖ್ಯೆ ಪ.ಪಂ.ವಿ./ ವಿ.ಮಾ.ಪ್ಲಾ/ಅಂತಿಮ/2007–08, ದಿನಾಂಕ 30–8–07 ಹಾಗೂ 12–11–07.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ. ನಯೋ(18): ವಿರಾಜಪೇಟೆ, ಮ.ಯೋ.ಅಂ. 4979: 2008.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ, ಮಡಿಕೇರಿ ಜಿಲ್ಲೆ, ವಿರಾಜಪೇಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ವಿರಾಜಪೇಟೆ ಪಟ್ಟಣ ಪಂಚಾಯಿತಿಯು ವಿರಾಜಪೇಟೆ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(1)ರನ್ವಯ ಅಗತ್ಯ ಕ್ರಮ ಜರುಗಿಸಿ, ಮಹಾ ಯೋಜನೆಯ ನಕ್ಷೆಗಳನ್ನು ಹಾಗೂ ವರದಿಯನ್ನು ತಯಾರಿಸಿ ಸರ್ಕಾರದ ಅಂತಿಮ ಅನುಮೋದನೆಗೆ ನಗರ ಯೋಜನಾ ಇಲಾಖೆಯ ಮುಖಾಂತರ ಸಲ್ಲಿಸಲಾಗಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ವಿರಾಜಪೇಟೆ, ಪಟ್ಟಣದ ಜನಸಂಖ್ಯೆಯು 2021ರಲ್ಲಿ 24,000ಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 12ರಲ್ಲಿನ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಯೋಜಿತ ಬೆಳವಣಿಗೆಗಳಿಗಾಗಿ ಪ್ರಸ್ತಾಪಿಸಿರುವ ಒಟ್ಟು 263 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 157.54 ಹೆಕ್ಟೇರ್ (ಶೇ.60.60), ವಾಣಿಜ್ಯಕ್ಕಾಗಿ 13.12 ಹೆಕ್ಟೇರ್ (ಶೇ. 5.04), ಕೈಗಾರಿಕೆಗಾಗಿ 8.82 ಹೆಕ್ಟೇರ್ (ಶೇ. 3.39), ಸಾರ್ವಜನಿಕ : ಅರೆ ಸಾರ್ವಜನಿಕ ವಲಯಕ್ಕಾಗಿ 17.34 ಹೆಕ್ಟೇರ್ (ಶೇ. 6.68), ನಾಗರೀಕ ಸೌಲಭ್ಯಕ್ಕಾಗಿ 0.22 ಹೆಕ್ಟೇರ್ (ಶೇ. 0.08), ಉದ್ಯಾನವನ : ಬಯಲು ಜಾಗೆಗಾಗಿ 22.64 ಹೆಕ್ಟೇರ್ (ಶೇ. 8.71), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 40.30 ಹೆಕ್ಟೇರ್ (ಶೇ. 15.50) ಪ್ರದೇಶವನ್ನು ನಿಗಧಿಪಡಿಸಿ ಮಹಾ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ವಿಷಯವನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 33 ಮೈಅಪ್ರಾ 2008, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2008.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಡಿಕೇರಿ ಜಿಲ್ಲೆ, ವಿರಾಜಪೇಟೆ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾ ಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(3)ರನ್ವಯ ಸರ್ಕಾರದ ಅಂತಿಮ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆಗೆ ಅಂತಿಮ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 331

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

**ವಿಷಯ :** ಚಿತ್ರದುರ್ಗ ಜಿಲ್ಲೆ, ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ನಅಇ 256 ಬೆಂರೂಪ್ರಾ 2003, ದಿನಾಂಕ 3–2–2004.
2. ಸಹಾಯಕ ನಿರ್ದೇಶಕರು, ನಗರ ಯೋಜನಾ ಇಲಾಖೆ ಚಿತ್ರದುರ್ಗ ಇವರ ಪತ್ರ ಸಂಖ್ಯೆ: ನಯೋಚಿ ಸನಿ: ಹಿ.ಮಯೋನ: 538: 07–08, ದಿ: 7–11–2007.
3. ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಕಡತ ಸಂಖ್ಯೆ ನಯೋ: ಉನಿ(ಕೇಂ.ಕಾ)13: ಮ.ಯೋ.ಪ–1(ತಾ) : ಹಿರಿಯೂರು :127: 07–08, ದಿ:

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹಿರಿಯೂರು ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೊಜನೆಗೆ (ಸ್ಥೂಲಾಭಿವೃದ್ಧಿ ಯೋಜನೆ) ಅಂತಿಮ ಅನುಮೋದನೆ ನೀಡಲಾಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ನಗರ ಯೋಜನಾ ಸಹಾಯಕ ನಿರ್ದೇಶಕರು ಚಿತ್ರದುರ್ಗ ಇವರು ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ ಪರಿಷ್ಕೃತ 1ರ ನಕ್ಷೆ ಹಾಗೂ ವರದಿಯನ್ನು ತಯಾರಿಸಿ ನಗರ ಯೋಜನಾ ನಿರ್ದೇಶಕರು ಮುಖಾಂತರ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ.

2001ರ ಜನಗಣತಿಯಂತೆ ಹಿರಿಯೂರು ಪಟ್ಟಣದ ನಗರದ ಜನಸಂಖ್ಯೆ 48,806 ಇದ್ದು, ಮುಂದಿನ ಯೋಜನಾ ಅವಧಿಗೆ ಅಂದರೆ, 2021ರ ವೇಳೆಗೆ ಜನಸಂಖ್ಯೆಯು 1,00,000 ಆಗಬಹುದೆಂದು ಅಂದಾಜಿಸಿ, ಮಹಾ ಯೋಜನೆಯನ್ನು ರೂಪಿಸಲಾಗಿದೆ. ಹಿರಿಯೂರು ಸ್ತಳೀಯ ಯೋಜನಾ ಪ್ರದೇಶದ ವ್ಯಾಪ್ತಿಯ ವಿಸ್ತೀರ್ಣ 2734.74 ಹೆಕ್ಟೇರ್ ಇದ್ದು, ನಗರೀಕರಣ ಎಲ್ಲೆಯು 1520.92 ಹೆಕ್ಟೇರ್ ಇರುತ್ತದೆ. ಹಿರಿಯೂರು ನಗರದ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನಾ ವ್ಯವಸ್ಥೆಯ ಸಮಸ್ಯೆ, ಪಟ್ಟಣದ ಬೆಳವಣಿಗೆಯ ದಿಕ್ಕು ಇತ್ಯಾದಿಗಳನ್ನು ವಿಶ್ಲೇಷಿಸಿ, ಯೋಜನಾ ತತ್ವ ಹಾಗೂ ಮಹಾ ಯೋಜನೆ ತಯಾರಿಕೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಪ್ರಕರಣ (12)ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ, ಪಟ್ಟಣದ ಮುಂದಿನ ಬೆಳವಣಿಗೆಗೆ/ ವಿವಿಧ ಉಪಯೋಗಗಳಿಗೆ ಬೇಕಾಗಬಹುದಾದ ಜಾಗಗಳನ್ನು ಕಾಯ್ದಿರಿಸಿ, ನಗರೀಕರಣ ಎಲ್ಲೆಯನ್ನು ನಿಗದಿಪಡಿಸಿ, ಮಹಾ

ಯೋಜನೆಯನ್ನು ತಯಾರಿಸಲಾಗಿದೆ ಎಂದು ತಿಳಿಸುತ್ತಾ, ಕೆ.ಟಿ.ಸಿ.ಪಿ. ಕಾಯ್ದೆ 1961 ಕಲಂ 13(1)ರನ್ವಯ ಕ್ರ.ಸಂ. 3ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವಂತೆ ನಗರ ಯೋಜನಾ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 01 ಬೆಂರೂಪ್ರಾ 2008, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2008.**

ಚಿತ್ರದುರ್ಗ ಜಿಲ್ಲೆ, ಹಿರಿಯೂರು ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಗೆ (ಪರಿಷ್ಕೃತ–1) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 13(1)ರನ್ವಯ ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ತಾತ್ಕಾಲಿಕ ಅನುಮೋದನೆ ನೀಡಲಾಗಿದೆ.

(ii) ವಲಯ ನಿಯಮಾವಳಿಗಳಲ್ಲಿ ಗ್ರೂಪ್ ಹೌಸಿಂಗ್‌ಗೆ ಸಂಬಂಧಿಸಿದಂತೆ ವರದಿಯ ಟಿಪ್ಪಣಿ ಸಂಖ್ಯೆ. 5 (ಪುಟ ಸಂಖ್ಯೆ 94) ಕೆಳಕಂಡಂತೆ ತಿದ್ದುಪಡಿ ಮಾಡಿ ಒಪ್ಪಬಹುದು.

5. C.A. Sites reserved in the development plan shall be developed by the owner and finally handed over to the Resident Association of the project for maintenance.

ಹಿರಿಯೂರು ಪಟ್ಟಣದ ನಗರದ ಮಹಾ ಯೋಜನೆಗೆ (ಪರಿಷ್ಕೃತ–1) ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಮತ್ತು ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 392

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub :** Shifting of location for construction of Primary Health Centre Complex under KHSDRP, Tranche-1, reg.

**Read :** Govt. Order No. HFW/KHSDRP/Sect/Civ-1/2007-08, Bangalore, dt: 9-11-2007.

**Preamble:**

Government in their Order read at (1) above accorded administrative approval to the individual estimates of 34 Primary Health Centre Complexes and 152 ANM Sub-Centres at a total cost of Rs. 3302.84 lakhs and Rs. 2340.40 lakhs respectively. Under the said Govt. Order it was proposed to construct a PHC Complex at Mudimadagu of Srinivasapur Taluk in Kolar District at an estimated cost of RS. 95.59 lakhs.

Subsequently, it was reported by the Executive Engineer, Bangalore Division and the District Health and Family Welfare Officer, Kolar that the said site is under litigation and therefore it would be preferred if the location could be changed. Hence, it was proposed to construct the PHC Complex at Dalasanur village of Kasaba Hobli, Srinivasapur Taluk, Kolar District, after confirming availability of site free of litigation.

Hence, the following order.

**Govt. Order No. HFW/KHSDRP/SECT/Civ-1/2007-08, Bangalore, Dated 19th July 2008**

Under the circumstances mentioned in the preamble, Government approves the selection of site for construction of PHC Complex at Dalasanur village of Kasaba Hobli, Srinivasapur Taluk, Kolar District instead of Mudimadagu of Srinivasapur Taluk in Kolar District, at the same estimated cost of Rs. 95.59 lakhs (Rupees ninetyfive lakhs, fiftynine thousand) only.

By order and in the name of the Governor of Karnataka,

PR. 1073

**SUSHAMA GODBOLE**

Deputy Secretary to Government,

KHSDRP

Health and Family Welfare Department.